# ಸಂಸ್ಕೃತಿ

ಅಥವಾ

# ಮರ್ಜಿ ಮಾತು ನಡೆವಳಿಗಳ ಸೊಬಗು

## ಪೀಠಿಕೆ

"ಸಂಸ್ಕೃತಿ" ಎಂಬ ಮಾತು ನಮ್ಮಲ್ಲಿ ಈಚೀಚೆಗೆ ಬಹುವಾಗಿ ಬಳಕೆಗೆ ಬರುತ್ತಿದೆ. ಇದಕ್ಕೆ ಮುಖ್ಯಕಾರಣ ಆ ಮಾತಿನ ಇಂಗ್ಲಿಷ್ ಮೂಲವಾದ 'ಕಲ್ಚರ್' (Culture) ಎಂಬ ಪದಕ್ಕೆ ಇಂದಿನ ಲೋಕವ್ಯವಹಾರದಲ್ಲಿ ಬಂದಿರುವ ಅತಿಶಯವಾದ ರೂಢಿಯೇ ಎಂದು ಹೇಳಬಹುದು.

'ಕಲ್ಚರ್' ಶಬ್ದವು ಇಂಗ್ಲಿಷಿನಲ್ಲಿ ಅದರ ಈ ಹೊತ್ತಿನ ಅರ್ಥದಲ್ಲಿ ಹೆಚ್ಚಾಗಿ ಪ್ರಯೋಗವಾಗುತ್ತಿರುವುದು ಸುಮಾರು ನೂರು ವರ್ಷದಿಂದೀಚೆಗೆ. ಅದರಲ್ಲಿಯೂ ಕಳೆದ ಐವತ್ತು ವರ್ಷಗಳಲ್ಲಿ ಅದರ ಉಪಯೋಗ ಕ್ರಮೇಣ ಬೆಳೆದಿದೆ. ಯುನೈಟೆಡ್ ನೇಷನ್ಸ್ (United Nations = ಜನಪದಸಂಘ) ಎಂಬ ಪ್ರಪಂಚ ಸಂಸ್ಥೆ ಹುಟ್ಟಿದ (೧೯೪೫) ಮೇಲಂತೂ ಈ ಮಾತಿನ ಹಾರಾಟ ಅತಿಯಾಗಿದೆ. ಆ ಸಂಸ್ಥೆಯ ಅಂಗವಾಗಿ ೧೯೪೬ ರಲ್ಲಿ ಸ್ಥಾಪಿತವಾದ (Unesco, ಯುನೆಸ್ಕೊ) ವಿದ್ಯಾವಿಜ್ಞಾನ ಸಂಸ್ಕೃತಿ ಸಮಿತಿಯು "ಸಂಸ್ಕೃತಿ" (ಕಲ್ಚರ್) ಎಂಬ ಮಾತನ್ನು ತನ್ನ ಹೆಸರಿನಲ್ಲಿಯೇ ಅಂಗೀಕರಿಸಿಕೊಂಡು ಅದಕ್ಕೊಂದು ಅಧಿಕಾರ ಸ್ಥಾನವನ್ನು ಕಲ್ಪಿಸಿದೆ. ಇಂಡಿಯದ ಸರಕಾರವೂ ಸಂಸ್ಕೃತಿಯ ಧ್ವಜವನ್ನೆತ್ತಿದೆ.

ಹಾಗಾದರೆ ಇಷ್ಟು ಮಹತ್ತ್ವವುಳ್ಳ ಆ ಮಾತಿನ ಅರ್ಥವೇನು?

ಅದಕ್ಕೆ ಅಧಿಕಾರವತ್ತಾಗಿ ಅರ್ಥನಿಶ್ಚಯವನ್ನು ಇನ್ನೂ ಯಾರೂ ಮಾಡಿಲ್ಲ. ರೂಢಿಯಲ್ಲಿ ಆ ಪದಕ್ಕೆ ಅನೇಕ ಸಡಿಲವಾದ ಅರ್ಥಗಳಿವೆ. ಅವುಗಳನ್ನು ಒಂದು ನಿಷ್ಕರ್ಷೆಗೆ ತರಲು ಜನಪದಸಂಘ ಪ್ರಯತ್ನಿಸಿಲ್ಲ. ಆ ಸಂಘದ ಇದುವರೆಗಿನ ಚರಿತ್ರೆಯನ್ನು ನೋಡಿದರೆ, ಅದು ಈ ಪ್ರಶ್ನೆಯನ್ನು ಎತ್ತಿಕೊಳ್ಳುವುದರಿಂದ ಪ್ರಶ್ನೆ ಇತ್ಯರ್ಥವಾಗುವುದು ಹೋಗಿ ಇನ್ನೊಂದು ಹೊಸ ಜನಜನಾಂಗ ವಿವಾದ ಹುಟ್ಟಿಕೊಂಡೀತೇನೋ ಎಂದು ಶಂಕೆ ತೋರುತ್ತದೆ.

ಈ ಮಾತು ಹೀಗೆ ಅರ್ಥನಿರ್ಬಂಧಕ್ಕೆ ಸಿಕ್ಕದಿರುವುದೇ ಅದರ ವಿಶೇಷಗುಣವೆಂದು ಕೆಲಮಂದಿಗೆ ಎನ್ನಿಸಿದರೂ ಎನ್ನಿಸಬಹುದು. ಅದು ಹಾಗೆ 'ಮೊಗುಂ' ಆಗಿರುವುದರಿಂದ ಅದನ್ನು ಯಾರು ಬೇಕಾದರೂ ಯಾವ ಪ್ರಸಂಗದಲ್ಲಾದರೂ ವಾಕ್ಯಪೂರ್ತಿಗಾಗಿ ಉಪಯೋಗಿಸಿಕೊಳ್ಳಬಹುದಾಗಿದೆ. ಉಪನ್ಯಾಸದ ಅವಸರದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವೂ ಸ್ಪಷ್ಟಾರ್ಥವೂ ಇರುವ ಪದವೊಂದು ತೋರಿ ಬಾರದೆ ಹೋದಾಗ ಉಪನ್ಯಾಸಕನು "ಸಂಸ್ಕೃತಿ"ಯನ್ನು ಮುಂದಕ್ಕೆ ತಂದರೆ, ಸಭಿಕರು (ವಾಚಕರು) ಏನೋ ಒಂದು ಗಂಭೀರವಾದ ಸಂಗತಿ ಬಂತೆಂದು ಕುತುಕಪಡುತ್ತಾರೆ. "ಸಂಸ್ಕೃತಿ" ಎಂಬ ಅಕ್ಷರಗಳಲ್ಲೇ ತಕ್ಕ ಏನೋ ಮಹತ್ತ್ವ ಭಾಸವಾಗುತ್ತದೆ. ಸಂಸ್ಕೃತಿ, ಪ್ರಗತಿ, ಸ್ವಾತಂತ್ರ್ಯ, ಸಮತ್ವ, ಸೋದರತ್ವ, ಧರ್ಮ—ಮೊದಲಾದವು ಮಯಣದ ಮೆರುಗು ಮಾತುಗಳು. ಅವುಗಳ ಅರ್ಥಗಳನ್ನು ಬೇಕುಬೇಕಾದಂತೆ ಹಿಗ್ಗಿಸಬಹುದು, ತಗ್ಗಿಸಬಹುದು. ಇಂಥ ಎರಕದಚ್ಚಿನ (Cliche) ಮಾತುಗಳು ಭಾಷಣಕರ್ತನಿಗೆ ಕಷ್ಟಕಾಲದ ಸ್ನೇಹಿತರು. ಇನ್ನಾರೂ ಸಹಾಯಕ್ಕೊದಗದಾಗ ಅವರು ಒದಗಿಬರುತ್ತಾರೆ.

"ಸಂಸ್ಕೃತಿ" ಶಬ್ದವು ಅರ್ಥವಿಲ್ಲದ್ದೆಂದು ಯಾರೂ ಹೇಳರು. ಅದು ಅರ್ಥವುಳ್ಳದ್ದು ಮಾತ್ರವಲ್ಲ; ಅದರ ಅರ್ಥವು ವಿಶಾಲವಾದದ್ದು, ಬಹುಮುಖವಾದದ್ದು, ಮತ್ತು ನಮ್ಮ ಜೀವನಕ್ಕೆ ಬಹು ಮುಖ್ಯವಾದದ್ದು. ಯಾವ ಅಧಿಕಾರಪತ್ರವಾಗಲಿ ಪ್ರಮಾಣಭೂತವಾದ ನಿಘಂಟಾಗಲಿ ಅದಕ್ಕೆ ಅರ್ಥವಿವರಣೆ ಕೊಡದಿದ್ದರೂ, ವಿದ್ವಜ್ಜನಪ್ರಯೋಗದಿಂದ ಆ ಮಾತಿನ ಅರ್ಥವನ್ನು ನಮ್ಮ ಮನಸ್ಸುಗಳಿಗೆ ವಿಶದಪಡಿಸಿಕೊಳ್ಳಬಹುದಾಗಿದೆ. ನಮಗೆ ಅತ್ಯಂತ ಸಾರವತ್ತಾಗಿ, ನಮ್ಮ ಅನುದಿನದ ಉಪಯೋಗದಲ್ಲಿರುವ ಎಷ್ಟೋ ಪದಗಳಿಗೆ ಅರ್ಥಸೂತ್ರವನ್ನು ಹೇಳುವುದು ಸುಲಭವಲ್ಲ. "ಮನುಷ್ಯ" ಎಂದರೆ ಏನು? "ಸತ್ಯ" ಎಂದರೆ ಏನು? "ಧರ್ಮ" ಎಂದರೆ ಏನು? ಇಂಥ ಪ್ರಶ್ನೆಗಳು ಎಷ್ಟು ಸುಲಭವೋ ಉತ್ತರಗಳು ಅಷ್ಟು ಸುಲಭವಲ್ಲ. ಆದರೂ ಉತ್ತರಗಳುಂಟು. ಅವುಗಳನ್ನು ಕಂಡುಕೊಳ್ಳುವುದು ಪರಿಶ್ರಮದಿಂದ ಸಾಧ್ಯ. ವಿಚಾರಮಾಡಿ ನೋಡೋಣ.

---

## ಶಬ್ದಾರ್ಥವಿಚಾರ

ವಿದ್ಯಾಪ್ರಭಾವವನ್ನಾಗಲಿ ಸಾಹಿತ್ಯಮಹಿಮೆಯನ್ನಾಗಲಿ ಸಭ್ಯಜನರ ಗುಣಶೀಲಗಳನ್ನಾಗಲಿ ಕುರಿತು ಮಾತನಾಡುವ ಸಂದರ್ಭದಲ್ಲಿ ಸಂಸ್ಕೃತಿ ಎಂಬ ಪದ ಸೇರಿಕೊಂಡು ಬರುತ್ತದೆ. ಈ ಮಾತು ಪೂರ್ವದಲ್ಲಿ ಬಹಳ ಬಳಕೆಯಲ್ಲಿದ್ದಂತಿಲ್ಲ. ಪುರಾತನ ಗ್ರಂಥಗಳಲ್ಲಿ ಎಲ್ಲಿಯೂ ಅದರ ಪ್ರಯೋಗ ಕಾಣಿಸುವುದಿಲ್ಲ. ಆದರೆ ಅದಕ್ಕೆ ಜ್ಞಾತಿಪ್ರಾಯವಾದ "ಸಂಸ್ಕಾರ" ಎಂಬ ಪದವು ಪೂರ್ವಿಕ ಪ್ರಯೋಗದಲ್ಲಿದೆ. ಷೋಡಶ "ಸಂಸ್ಕಾರ"ಗಳು, ಬುದ್ಧಿ "ಸಂಸ್ಕಾರ", ಇತ್ಯಾದಿ ಪದಗಳು ಎಲ್ಲರಿಗೂ

ಪರಿಚಿತವಾದವು. ಸಂಸ್ಕಾರಪಡೆದ ಭಾಷೆ "ಸಂಸ್ಕೃತ". ಹಾಗೆಯೇ ಒಳ್ಳೆಯ ವಿದ್ಯಾಸಂಸ್ಕಾರ ಪಡೆದ ಮನುಷ್ಯನು "ಸುಸಂಸ್ಕೃತ"ನು. ಇದು ಹಿಂದಿನ ವಾಡಿಕೆ.

ಸುಸಂಸ್ಕೃತನ ಗುಣಸಂಪತ್ತು "ಸಂಸ್ಕೃತಿ". ಈ ಅರ್ಥದಲ್ಲಿ ಸಂಸ್ಕೃತಿ ಶಬ್ದ ಕನ್ನಡದಲ್ಲಿ ಈಗ ಹದಿನೈದಿಪ್ಪತ್ತು ವರ್ಷಗಳಿಂದ ಈಚೆಗೆ ಹೆಚ್ಚಾಗಿ ರೂಢಿಗೆ ಬರುತ್ತಿದೆ. ಇದು ಅವಶ್ಯವಾದ ಶಬ್ದವೇ. ಒಂದು ಹೊಸ ಮಾತು ನಮ್ಮಲ್ಲಿ ವಾಡಿಕೆಗೆ ಬರುತ್ತಿದ್ದರೆ ಒಂದು ಹೊಸ ಅಭಿಪ್ರಾಯವು ನಮ್ಮ ಜೀವನದೊಳಕ್ಕೆ ಪ್ರವೇಶಿಸುತ್ತಿದೆ ಎಂದು ಅರ್ಥ. ಒಂದು ನವೀನ ಭಾವಕ್ಕೆ ಹೆಸರಾಗಿ ಒಂದು ನವೀನಪದ. ವಾಸ್ತವವಾಗಿ ಅದನ್ನು ನವೀನ ಭಾವವೆನ್ನುವುದಕ್ಕಿಂತ ವಿಸ್ಮೃತಭಾವವೆನ್ನುವುದು ಸರಿ. ಮರೆತುಹೋಗಿದ್ದದ್ದು ಈಗ ಜ್ಞಾಪಕಕ್ಕೆ ಬರುತ್ತಿದೆ. ಹಳೆಯ ವಸ್ತು ಕಣ್ಣಿಗೆ ತಪ್ಪಿಹೋಗಿದ್ದದ್ದು ಈಗ ಹೊಸ ಹೊಳಪಿನಿಂದ ಮರಳಿ ಬರುತ್ತಿದೆ. ಇದು ಆ ವಸ್ತುವಿನ ಚೈತನ್ಯವನ್ನು ತೋರಿಸುತ್ತದೆ. ಅದು ನಮ್ಮ ಜೀವನ ಸಾರ್ಥಕತೆಗೆ ಅವಶ್ಯವಾದದ್ದು.

ಯಾವ ಮನುಷ್ಯಗುಣೋತ್ಕೃಷ್ಟತೆಯನ್ನು ನಾವು ಈಗ ಸಂಸ್ಕೃತಿ ಎಂದು ಕರೆಯುತ್ತಿದ್ದೇವೋ ಆ ಅರ್ಥದಲ್ಲಿ "ಕಲ್ಚರ್" (Culture) ಶಬ್ದವು ಇಂಗ್ಲಿಷಿನಲ್ಲಿ ರೂಢಿಗೆ ಬಂದಿರುವುದೂ ಈಚೀಚೆಗೇ—ಸುಮಾರು ೧೫೦ ವರ್ಷಗಳಿಂದ. 'ಕಲ್ಚರ್' ಶಬ್ದದ ಮೂಲಪದವು ಲ್ಯಾಟಿನ್ ಭಾಷೆಯ 'ಕಲ್ಟ್' (Cult) ಅಥವಾ 'ಕಲ್ಟಸ್' (Cultus) ಎಂಬುದು. ಆ ಪದದ ಮೂಲಾರ್ಥ 'ಗೌರವಿಸು,' 'ಸೇವಿಸು,' 'ನಿಷ್ಠೆಮಾಡು,' 'ಲಕ್ಷ್ಯದಲ್ಲಿರಿಸಿಕೊ,' ಎಂಬ ರೀತಿಯದಾಗಿತ್ತು. ಆ ಮಾತಿನಿಂದ ಕ್ರಮೇಣ ಎರಡು ಅರ್ಥಗಳು ಹೊರಟವು: (೧) ದೈವಭಕ್ತಿ,

ವ್ರತದೀಕ್ಷೆ, ಮತಸಿದ್ಧಾಂತ ಇತ್ಯಾದಿ. (೨) ಭೂಮ್ಯಾಸಕ್ತಿ, ಭೂದೇವಿಯ ಆರಾಧನೆ, ಕೃಷಿ, ಉಳುಮೆ, ಪೈರು ಬೆಳಸುವುದು ಇತ್ಯಾದಿ. ಎರಡನೆಯ ಅರ್ಥದಿಂದ ಬಂದದ್ದು "ಅಗ್ರಿಕಲ್ಚರ್" (Agriculture) ಭೂವ್ಯವಸಾಯ. ಕಾಲಕ್ರಮದಲ್ಲಿ ಈ ಎರಡನೆಯ ಅರ್ಥದಿಂದ,—ಎಂದರೆ ಭೂವ್ಯವಸಾಯ ಎಂಬುದರಿಂದ,—ಪದಾರ್ಥಗಳನ್ನು ಉತ್ಪತ್ತಿಮಾಡುವುದು, ಬೆಳೆ ತೆಗೆಯುವುದು ಎಂಬ ಅಭಿಪ್ರಾಯ ಹೊರಟಿತು. ಹಾಗೆ ಬಂದ ಮಾತುಗಳು 'ಹಾರ್ಟಿಕಲ್ಚರ್' (ತೋಟ ಬೆಳಸುವುದು), 'ಆರ್ಬೊರಿಕಲ್ಚರ್' (ಮರ, ಪೊದೆಗಳನ್ನು ಬೆಳಸುವುದು) ಮೊದಲಾದುವು. ಅಲ್ಲಿಂದ ಮುಂದಕ್ಕೆ 'ಸೆರಿಕಲ್ಚರ್' (ರೇಷ್ಮೆಹುಳು ಸಾಕುವುದು), 'ಪಿಸ್ಸಿಕಲ್ಚರ್' (ಮೀನು ಸಾಕುವುದು) ಮೊದಲಾದ ಮಾತುಗಳು ಬಂದವು. ಈ ತೆರದ ಅರ್ಥ ವಿಸ್ತರಿಸುತ್ತ ವಿಸ್ತರಿಸುತ್ತ ವ್ರಣದ ಕೀವಿನಿಂದ ಸೂಕ್ಷ್ಮ ವಿಷಾಣುಗಳನ್ನು ಬೆಳಸುವುದು (ಬ್ಯಾಕ್ಟಿರಿಯೊಲಾಜಿಕಲ್ ಕಲ್ಚರ್), ಕೃತಕ ಮುತ್ತುಗಳ ತಯಾರಿ—ಈ ಮೊದಲಾದ ಅರ್ಥಗಳು ಬಂದವು. ಕಡೆಗೆ ಸುಮಾರು ಒಂದು ನೂರು ವರ್ಷಗಳ ಹಿಂದೆ (೧೮೬೭) ಮನುಷ್ಯನ ಬುದ್ಧಿಯ ವ್ಯವಸಾಯ, ಮನಸ್ಸಿನ ಮೇಲ್ಮೆ, ಅಂತರಂಗ ಸಂಸ್ಕಾರ ಎಂಬೀ ಅರ್ಥವು ಪ್ರಚಾರಕ್ಕೆ ಬಂತು. ಹೀಗೆ ಸಾಹಿತ್ಯ ಸಂಗೀತ ಚಿತ್ರಣ ಶಿಲ್ಪ ಮೊದಲಾದ ಕಲೆಗಳ ಮೂಲಕ ಉಂಟಾಗತಕ್ಕ ಉತ್ತಮ ಮನೋಭಾವ ಎಂಬ ಅಭಿಪ್ರಾಯ ರೂಢಿಗೆ ಬಂದಿದೆ. ಈಗ್ಗೆ ೮೦ ವರ್ಷಗಳ ಹಿಂದೆ—೧೮೬೯ ರಲ್ಲಿ—ಮ್ಯಾತ್ಯು ಆರ್ನಾಲ್ಡ್ (Matthew Arnold) ಎಂಬ ಆಂಗ್ಲೇಯ ವಿದ್ವತ್ಕವಿಯು ('ಕಲ್ಚರ್ ಅಂಡ್ ಅನಾರ್ಕಿ' Culture and Anarchy)—'ಸಂಸ್ಕೃತಿ ಮತ್ತು ಅನಾಯಕತೆ'—ಎಂಬ ವಚನ ಪ್ರಬಂಧದಲ್ಲಿ, ಆಗಿನ ಇಂಗ್ಲಿಷ್ ಸಮಾಜದಲ್ಲಿ ಆತನ ಕಣ್ಣಿಗೆ ಎದ್ದು

ಕಾಣುತ್ತಿದ್ದ ಮೂರು ಜನ ವರ್ಗಗಳ ಮನೋಬುದ್ಧಿ ಪರಿಪಾಕ ವನ್ನು ವಿಮರ್ಶೆ ಮಾಡಿದ್ದಾನೆ. ಆಗರ್ಭ ಶ್ರೀಮಂತರಾದ ಅನಾಗರಿಕರು, ದ್ರವ್ಯಪರಾಯಣರಾದ ನೀರಸಜೀವಿಗಳು, ಅಹಸ್ಪೃಹನಿಕಾಲಕ್ಷೇಪದ ಕಂಗಾಲಿಗುಂಪು—ಈ ಮೂರು ಆ ಇಂಗ್ಲಿಷ್ ಜನವರ್ಗ. ಈ ಮೂರು ಜನ ಸ್ಥಾನಗಳಲ್ಲಿ ಎಲ್ಲಿಯೂ ಸಂಸ್ಕೃತಿಯು ರಸಿಕತೆ ಇಲ್ಲವೆಂಬುದು ಮ್ಯಾತ್ಯು ಆರ್ನಾಲ್ಡ್ ಎತ್ತಿದ ದೂರು.

ಸಂಸ್ಕೃತಿಯೆಂಬುದು ಬರಿಯ ವಿದ್ಯೆಯಲ್ಲ; ಅದು ವಿದ್ಯಾ ಕುಸುಮಪರಾಗ. ಅದು ಸಾಹಿತ್ಯಪರಾಮರ್ಶೆಯ ಮತ್ತು ಜೀವನಾನುಭವ ವಿವೇಕದ ದಾಂಪತ್ಯದಿಂದ ಜನಿಸುವ ಒಂದಾ ನೊಂದು ಲೋಕಸಮಾಧಾನಕಾರಕವಾದ ಶೀಲಸೌಭಾಗ್ಯ. ಅದು ಜೀವನದ ನಾನಾ ವಿಷಯಗಳ, ನಾನಾ ಧ್ಯೇಯಗಳ, ನಾನಾ ತತ್ತ್ವಗಳ, ನಾನಾ ಧರ್ಮಗಳ—ಮೌಲ್ಯತಾರತಮ್ಯಜ್ಞಾನ ದಿಂದಾದ ಸಮನ್ವಯ ಸ್ವಾರಸ್ಯ.

ಸಂಸ್ಕೃತಿಯೆಂಬುದು ಪಾಂಡಿತ್ಯಮಾತ್ರವಲ್ಲ. ಒಬ್ಬ ಮನುಷ್ಯ ಹತ್ತು ಭಾಷೆಗಳನ್ನು ಕಲಿತಿರಬಹುದು, ನೂರು ಗ್ರಂಥಗಳನ್ನು ಓದಿರಬಹುದು, ವ್ಯಾಕರಣ ನಿಘಂಟುಗಳನ್ನು ಕರತಲಾಮಲಕ ಮಾಡಿಕೊಂಡಿರಬಹುದು; ಅಷ್ಟರಿಂದಲೇ ಅವನು 'ಸಂಸ್ಕೃತ' ಪುರುಷನೆನಿಸಲಾರ.

ಬರಿಯ ತಿಳಿವಳಿಕೆಯಾಗಲಿ ವಸ್ತುವಿಜ್ಞಾನವಾಗಲಿ ಸಂಸ್ಕೃತಿ ಯಲ್ಲ. ಒಬ್ಬ ಮನುಷ್ಯ ಹತ್ತಾರು ದೇಶಗಳಲ್ಲಿ ಸಂಚಾರ ಮಾಡಿರಬಹುದು. ನೂರಾರು ಮಂದಿಯೊಡನೆ ವ್ಯವಹಾರ ಬೆಳಸಿರಬಹುದು. ಭೂವಿವರಣೆಯ ಪುಸ್ತಕದಿಂದಲೂ ಚರಿತ್ರೆ ಯಿಂದಲೂ ಸರಕಾರದ ವರದಿಗಳಿಂದಲೂ ವಾರ್ತಾಪತ್ರಿಕೆ ಗಳಿಂದಲೂ ಸಾವಿರಾರು ಸಂಗತಿಗಳನ್ನು ತನ್ನ ನೆನಪಿನ

ಉಗ್ರಾಣದಲ್ಲಿ ಶೇಖರಿಸಿಕೊಂಡಿರಬಹುದು. ಆದರೂ ಈ ವಿವಿಧ ಸಂಗತಿಗಳ ಸಂಗ್ರಹ ತಾನೇ ಸಂಸ್ಕೃತಿಯಾಗಲಾರದು.

ಬರಿಯ ಜಾಣತನವೂ ಯುಕ್ತಿಯೂ ಸಂಸ್ಕೃತಿಯಲ್ಲ. ಒಬ್ಬ ಮನುಷ್ಯ ಚಮತ್ಕಾರವಾಗಿ ಮಾತನಾಡಬಹುದು. ತರ್ಕದಲ್ಲಿ ಸೂಕ್ಷ್ಮಾಂಶಗಳನ್ನೆತ್ತಿ ಪ್ರತಿವಾದಿಗೆ ಬಾಯಿ ಮುಚ್ಚಿಸಬಹುದು. ಕಾರ್ಯನಿರ್ವಾಹದಲ್ಲಿ ಜಾಗರೂಕತೆಯನ್ನೂ ತಾಳ್ಮೆಯನ್ನೂ ತೋರಿ, ಉಪಾಯದಿಂದಲೂ ನಯದಿಂದಲೂ ಜಯ ಸಂಪಾದನೆ ಮಾಡಬಹುದು. ಅದೂ ಸಂಸ್ಕೃತಿಯಲ್ಲ.

ಸಂಗೀತ ಮೊದಲಾದ ಲಲಿತ ಕಲಾಭಿರುಚಿಯೂ ಸಂಸ್ಕೃತಿಯಲ್ಲ. ಒಬ್ಬಾನೊಬ್ಬನು ರಾಗಗಳನ್ನು ಗುರುತಿಸಬಹುದು; ಚಿತ್ರಪಟದ ವರ್ಣರೇಖೆಯ ಗುಣದೋಷಗಳನ್ನು ವಿಮರ್ಶಿಸಬಹುದು; ಶಿಲ್ಪವಿಗ್ರಹದ ಅಂಗಾಂಗ ಪ್ರಮಾಣಗಳನ್ನು ಚರ್ಚಿಸಬಹುದು; ಅಭಿನಯ ನಿಪುಣನಾಗಿರಬಹುದು. ಅದರಿಂದ ಅವನು ಸಂಸ್ಕೃತನೆಂದು ಸಿದ್ಧವಾಗದು.

ಅವನು ಒಳ್ಳೆಯ ಭಾಷಣಕಾರನಾಗಿರಬಹುದು, ವಾಗ್ಧೋರಣೆ ಪಡೆದಿರಬಹುದು, ಸಂಭಾಷಣೆಯಲ್ಲಿ ಪದ್ಯಗಳನ್ನೂ ಗಾದೆಗಳನ್ನೂ ಉದಾಹರಿಸಬಹುದು, ಉಪಕಥೆ ಹೇಳಬಹುದು, ಸಂವಾದದಲ್ಲಿ ಚಮತ್ಕಾರ ತೋರಿಸಬಹುದು. ಇದಾವುದೂ ಸಂಸ್ಕೃತಿಯ ಒಳತಿರುಳಲ್ಲ.

ಹಾಗಾದರೆ ಸಂಸ್ಕೃತಿಯೆಂಬುದೇನು ? ಸಂಸ್ಕಾರದಿಂದ ಸಂಸ್ಕೃತಿ. "ಸಂಸ್ಕಾರ" ಅಥವಾ "ಸಂಸ್ಕರಣ" ಎಂದರೆ ಸಮ್ಯಕ್‌ಕರಣ,—ಸಮ್ಯಕ್‌ಕೃತಿ, ಸಂಸ್ಕೃತಿ. ಹಾಗೆಂದರೆ ಚೆನ್ನಾಗುವಂತೆ ಮಾಡುವುದು, ಒಳ್ಳೆಯದನ್ನಾಗಿಸುವುದು, ಶುದ್ಧಿಮಾಡಿ ಉತ್ತಮಪಡಿಸುವುದು ಎಂದರ್ಥ. 'ಒಳ್ಳೆಯದು' ಎಂದರೆ ಒಂದಾನೊಂದು ಪದಾರ್ಥವು ಅಥವಾ ಸಂಗತಿಯು

ಹೇಗಿರಬೇಕೋ ಹಾಗಿರುವುದು. ಒಂದು ವಸ್ತು ಅಥವಾ ಒಂದು ವರ್ತನೆ ಹೇಗಿದ್ದರೆ ನಮ್ಮ ಜೀವಿತದ ಪರವೋ ದ್ದೇಶಸಿದ್ಧಿಯು ನಮಗೆ ಹತ್ತಿರ ಹತ್ತಿರವಾದೀತೋ ಅದೇ 'ಒಳ್ಳೆಯದು.' ಅದೇ ಹಿತ. ಅದೇ ಔಚಿತ್ಯ. ಅದೇ ಸಾಧುತೆ. ಆ ಒಳ್ಳೆಯದನ್ನು ಕಂಡುಕೊಳ್ಳುವ ಪ್ರಯತ್ನವೇ,—ಆ ಹಿತವನ್ನು ಹುಡುಕುವುದೇ ಸಂಸ್ಕೃತಿ. ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವ ವಿಧಾನವೇ ಸಂಸ್ಕೃತಿ. ಲೋಕದೊಡನೆ ನಮಗಾಗುವ ನಾನಾ ಸಂಪರ್ಕಗಳಲ್ಲಿ ನಾವು ಸಂಪಾದಿಸುವ ಔಚಿತ್ಯವೇ ಸಂಸ್ಕೃತಿ.

ಸೊಗಸೆಂಬುದು ಎಲ್ಲರೂ ಎಲ್ಲೆಲ್ಲಿಯೂ ಬಯಸುವ ಒಂದು ಪರಿಸ್ಥಿತಿಯಲ್ಲವೆ? ನಾವು ಮೈಯನ್ನು ತೊಳೆದು ವಸ್ತ್ರಾಭರಣಗಳಿಂದ ಸೊಗಸುಪಡಿಸುತ್ತೇವೆ. ಮನೆಗೆ ಸುಣ್ಣ ಬಣ್ಣ ಮಾಡಿಸುತ್ತೇವೆ. ನಮ್ಮ ಕಣ್ಣಿಗೆ ಕಾಣಬರುವುದರಲ್ಲೆಲ್ಲ ಅಂದ ಚೆಂದಗಳನ್ನು ಹುಡುಕುತ್ತೇವೆ. ಅದರಂತೆ ನಮ್ಮ ಲೋಕ ಸಂಬಂಧಗಳಲ್ಲಿಯೂ ಒಂದು ಇಂಪು ಬೇಡವೆ? ಆ ನಡೆನುಡಿಗಳ ಸೊಗಸೇ ಸಂಸ್ಕೃತಿ. ಅದು ಭಾವಸೌಂದರ್ಯ ಮತ್ತು ಶೀಲ ಸೌಂದರ್ಯ. ಆ ಆಭರಣವನ್ನು ತೊಡದಿರುವ ಜೀವ ಕಾಡು ಮೃಗ. ನಾವು ದೇಹಗೇಹಗಳನ್ನು ಚೊಕ್ಕಟ ಚೆಲುವೆನಿಸಲು ಪ್ರಯತ್ನಪಡುವಂತೆ ನಮ್ಮ ಲೋಕ ಬಾಂಧವ್ಯವನ್ನು ರಮ್ಯವೆನಿಸುವುದಕ್ಕೂ ಬುದ್ಧಿಪೂರ್ವಕವಾಗಿ ಪರಿಶ್ರಮಿಸಬೇಕು. ಅದೇ ಸಂಸ್ಕೃತಿಯ ಸಾರಾಂಶ.

ಆ ಸಂಸ್ಕೃತಿಯಲ್ಲಿ ಜೀವನ ಸಂದರ್ಭಗಳ ಯುಕ್ತಾಯುಕ್ತ ವಿವೇಚನೆ ಒಂದು ಅಂಶ; ವಸ್ತುಗಳ ಮೂಲ್ಯತಾರತಮ್ಯಗಣನೆ ಇನ್ನೊಂದಂಶ; ಪರೇಂಗಿತ ಪರಿಜ್ಞಾನ ಮತ್ತೊಂದು ಅಂಶ; ಸರಸತಾಭಿರುಚಿ ಮತ್ತೊಂದು ಅಂಶ;

ಧರ್ಮಚಿಂತನೆಯ ಜಾಗರೂಕತೆ ಮತ್ತೊಂದಂಶ. ಹೀಗೆ ನಾನಾ ವಿಜ್ಞಾನ ನಾನಾ ವಿವೇಕಗಳ ಸಮಾವೇಶದ ಫಲ ಸಂಸ್ಕೃತಿ.

ಈ ಜೀವನೌಚಿತ್ಯದ್ಧ ಸಿದ್ಧಿ ಅಂತರಂಗ ಕೃಷಿಯಿಂದ. ಆ ಕೃಷಿಯ ಅಂಶಗಳು ಗ್ರಂಥವ್ಯಾಸಂಗ, ಕಲೋಪಾಸನೆ, ರಸಿಕ ಸಹವಾಸ, ಲೋಕಮರ್ಯಾದಾಪರಿಶೀಲನೆ. ಪಾಂಡಿತ್ಯಕ್ಕೂ ಸಂಸ್ಕೃತಿಗೂ ವಿರೋಧವೇನೂ ಇಲ್ಲ. ಬುದ್ಧಿ ಕುಶಲತೆಗೂ ಸಂಸ್ಕೃತಿಗೂ ವೈಷಮ್ಯವೇನೂ ಇಲ್ಲ. ಸಂಸ್ಕೃತಿಯಲ್ಲಿ ವಿದ್ವತ್ತೆಗೂ ಪ್ರತಿಭೆಗೂ ಚತುರತೆಗೂ ಜಾಗವುಂಟು ; ಆದರೆ ಅವಷ್ಟರಿಂದಲೇ ಸಂಸ್ಕೃತಿಯಾಗದು. ಸಂಸ್ಕೃತಿಯೆಂಬುದು ಒಂದು ಅಂತರಂಗದ ಪರಿಪಾಕ. ಆ ಪಾಕಕ್ಕೆ ಹತ್ತಾರು ಪರಿಕರಗಳು ಬೇಕಾಗುತ್ತವೆ. ಆ ಸಾಮಗ್ರಿಗಳಲ್ಲಿ ಯಾವ ಒಂದೂ ತಾನೊಂದೇ ಸಂಸ್ಕೃತಿ ಎಂದು ಹೇಳಿಕೊಳ್ಳಲಾಗದು.

---

## ಮ್ಯಾತ್ಯು ಆರ್ನಾಲ್ಡನ ಮಾತು

ಈ ವಿಚಾರದಲ್ಲಿ ಕೃತಪರಿಶ್ರಮನಾದ ಮ್ಯಾತ್ಯು ಆರ್ನಾಲ್ಡನ ಮಾತನ್ನಾಲಿಸೋಣ. ಜೀವನದ ಪ್ರತಿಯೊಂದು ಸನ್ನಿವೇಶದಲ್ಲಿಯೂ ನಮ್ಮ ಮನೋಭಾವವೂ ವರ್ತನೆಯೂ ಔಚಿತ್ಯ ಪರಿಪೂರ್ಣವಾಗುವಂತೆ ಮಾಡುವ ಪ್ರಯತ್ನವೇ ಸಂಸ್ಕೃತಿ. ಆತ ಹೀಗೆ ಹೇಳಿದ್ದಾನೆ :—

"ಬುದ್ಧಿಗೆ ತಿಳಿವಳಿಕೆಯನ್ನು ಸಂಪಾದಿಸಿಕೊಡಬೇಕೆಂಬ ಶುದ್ಧ ವಿಜ್ಞಾನಾಕಾಂಕ್ಷೆಯ ಬಲದಿಂದ ಮಾತ್ರವೇ ಅಲ್ಲದೆ, ಜನಕ್ಕೆ ಒಳ್ಳೆಯದನ್ನು ಮಾಡಬೇಕೆಂಬ ಸಮಾಜ ಹಿತಾಕಾಂಕ್ಷೆಯ ಮತ್ತು ಧರ್ಮಾಕಾಂಕ್ಷೆಯ ಬಲದಿಂದಲೂ ಪ್ರೇರಿತವಾಗಿ ನಡೆಯತಕ್ಕದ್ದು ಸಂಸ್ಕೃತಿ. ಅದರ ಧ್ಯೇಯ

ವಾಕ್ಯವು ಬಿಷಪ್ ವಿಲ್ಸನ್ ಎಂಬಾತನು ಹೇಳಿದಂತೆ ಹೀಗಿರುತ್ತದೆ:—

'ಲೋಕದಲ್ಲಿ ವಿವೇಕವೂ ಭಗವದಿಚ್ಛೆಯೂ
ಪ್ರಬಲಿಸುವಂತೆ ಮಾಡುವುದು.'

"ಆದರೆ, ಒಂದು ಸೂಕ್ಷ್ಮಾಂಶವನ್ನು ಮರೆಯಬಾರದು. ಒಳ್ಳೆಯದನ್ನು ಮಾಡಬೇಕೆಂಬ ಆವೇಶದಲ್ಲಿ ನಾವು ಆತುರವುಳ್ಳವರಾಗಿ, ವಿವೇಕವೇನು? ಭಗವದಿಚ್ಛೆಯೇನು? ಎಂದು ವಿಚಾರ ನಡಸುವಾಗ, ಜಾಗರೂಕತೆ ತಪ್ಪಿ ಭ್ರಾಂತರಾಗಬಹುದು. ಸುಕೃತದ ಮೇಲಣ ಆಕಾಂಕ್ಷೆ ತೀವ್ರವಾಗಿರುವಾಗ ನಮ್ಮ ಮನಸ್ಸು ಕ್ರಿಯಾತತ್ಪರವಾಗಿರುತ್ತದೆ. ಆಗ ವಿಚಾರ ವಿಮರ್ಶನೆಗೆ ಲಕ್ಷ್ಯಕೊಡುವಷ್ಟು ತಾಳ್ಮೆ ನಮಗಿರುವುದಿಲ್ಲ. ಆದದ್ದರಿಂದ ಆಗ ನಮ್ಮ ಬುದ್ಧಿಗೆ ಏನೇನು ಯುಕ್ತವೆಂದು ತೋರುತ್ತದೋ ಆ ಅರ್ಧಮರ್ಧವಾದ ಮತ್ತು ಅಪಕ್ವಗರ್ಭವಾದ ಭಾವನೆಗಳನ್ನೇ ಕಾರ್ಯದಲ್ಲಿ ಹೂಡುತ್ತೇವೆ. ಆದರೆ ಇದು ಸಂಸ್ಕೃತಿಯ ಲಕ್ಷಣವಲ್ಲ. ಸಂಸ್ಕೃತಿಯಲ್ಲಿ ಸುಕೃತಾಕಾಂಕ್ಷೆಯ ಜೊತೆಗೆ ಜ್ಞಾನಾಕಾಂಕ್ಷೆಯೂ ಬೆರೆತಿರುತ್ತದೆ. ವಿವೇಕವೇನು? ಭಗವದಿಚ್ಛೆಯೇನು? ಎಂಬ ವಿಷಯಗಳಲ್ಲಿ ಸಂಸ್ಕೃತಿಯು ಸಮಂಜಸವಾದ ತಿಳಿವನ್ನು ಅಪೇಕ್ಷಿಸುತ್ತದೆ. ಅದು ಸಂಶೋಧಿತವಾಗದ ಭಾವನೆಗಳನ್ನು ಸಹಿಸಲಾರದು. ವಿವೇಕದ ಆಧಾರವೂ ಭಗವದಿಚ್ಛೆಯ ಆಧಾರವೂ ಇಲ್ಲದ ಯಾವ ಕಾರ್ಯವೇ ಆಗಲಿ, ಯಾವ ವ್ಯವಸ್ಥೆಯೇ ಆಗಲಿ, ಹಿತಕರವಾಗಲಾರದು ಮತ್ತು ಚಿರಸ್ಥಾಯಿಯಾಗಲಾರದು—ಎಂಬುದನ್ನು ಸಂಸ್ಕೃತಿ ಅಂಗೀಕರಿಸಿಕೊಂಡಿರುತ್ತದೆ. ಆದದ್ದರಿಂದ ಮನುಷ್ಯಲೋಕದ ಕುಂದುಕೊರತೆಗಳನ್ನು ತಿದ್ದಿ, ಕಷ್ಟಗಳನ್ನು ಪರಿಹರಿಸ

ಬೇಕೆಂಬ ಪರಮಪವಿತ್ರವಾದ ಮಹೋದ್ದೇಶದಲ್ಲಿ ಕೂಡ ಸಂಸ್ಕೃತಿ ಆತುರಪಟ್ಟು ವರ್ತಿಸಲಾರದು. ಹೇಗೆ ಕೆಲಸಮಾಡುವುದು ಯುಕ್ತ? ಏನಾದರೆ ಉಚಿತ? ಎಂಬುದನ್ನು ಚೆನ್ನಾಗಿ ತಿಳಿಯದೆ ಮಾಡಿದ ಕೆಲಸ ಅನರ್ಥವಾದೀತು ಎಂಬುದನ್ನು ನಿಜವಾದ ಸಂಸ್ಕೃತಿ ತಿಳಿದುಕೊಂಡಿರುತ್ತದೆ.

"ಸಂಸ್ಕೃತಿಯು ಸಮಾಜಜೀವನದ ಒಂದು ಉಪಸೃಷ್ಟಿ. ಅದರ ಸಾರವಾದ ಔಚಿತ್ಯಪರಿಪೂರ್ಣತೆಯು ಏಕಾಕಿಯಾಗಿ ಬಾಳುವ ಮನುಷ್ಯನಿಗೆ ಸಾಧ್ಯವಿಲ್ಲ. ಮನುಷ್ಯವ್ಯಕ್ತಿ ತಾನು ಆ ಪೂರ್ಣತೆಯ ಕಡೆಗೆ ಪ್ರಯಾಣಮಾಡುವಲ್ಲಿ ಇತರರನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂಬುದು ವಿಧಿ. ಅವನು ಈ ವಿಧಿಯನ್ನು ಮುರಿದಲ್ಲಿ ಅವನ ಬೆಳವಣಿಗೆಯೇ ಮೊಟಕುಬಿದ್ದು, ಅವನು ತಾನೇ ದುರ್ಬಲನಾಗುತ್ತಾನೆ. ಅವನು ಸಂತತವಾಗಿ ತನ್ನ ಸಹಚಾರಿಗಳ ಗುಂಪನ್ನು ವಿಸ್ತರಿಸಿಕೊಳ್ಳುತ್ತಲೇ ಹೋಗಬೇಕು.

"ಮನುಷ್ಯ ಸ್ವಭಾವಕ್ಕೆ ಸೌಂದರ್ಯವನ್ನೂ ಬೆಲೆಯನ್ನೂ ಕೊಡುವ ಎಲ್ಲ ಶಕ್ತಿಗಳ ಸುಸಂಗತ ವಿಕಾಸವೇ ಸಂಸ್ಕೃತಿ. ಅದರಲ್ಲಿ ಯಾವ ಒಂದು ಶಕ್ತಿಯೂ ಉಳಿದ ಶಕ್ತಿಗಳಿಗೆ ಹಾನಿ ತರುವಷ್ಟು ಪ್ರಬಲವಾಗತಕ್ಕದ್ದಲ್ಲ. ಹೀಗೆ ನೋಡಿದಲ್ಲಿ ಸಂಸ್ಕೃತಿ ಎಂಬುದು ಮತಧರ್ಮಕ್ಕಿಂತ ವಿಸ್ತಾರವಾದದ್ದು.

"ಮೇಲೆ ನಾವು ಗುಣಪೂರ್ಣತೆ, ಔಚಿತ್ಯಸಂಪೂರ್ಣತೆ ಎಂಬ ಮಾತುಗಳನ್ನು ಉಪಯೋಗಿಸಿದ್ದೇವಷ್ಟೆ? ಪೂರ್ಣತೆ ಎಂದರೆ, ಯಾವುದೋ ಒಂದು ಆದರ್ಶದಂತೆ ಆಗುವುದು; ಯಾವುದೋ ಒಂದನ್ನು ಗಳಿಸಿಕೊಳ್ಳುವುದಲ್ಲ. ಅದು ಒಂದು ಅಂತರಂಗಸ್ಥಿತಿ, ಒಂದು ಆಂತರಿಕ ಮನೋಭಾವ; ಅದು ಬಾಹ್ಯಸಂದರ್ಭಗಳಲ್ಲ; ಅದು ಇತರರನ್ನು ಜಯಿಸುವುದಲ್ಲ; ಇತರರಿಂದ ಗೆದ್ದ ಲಾಭವಲ್ಲ."

"ಸಂಸ್ಕೃತಿಯೆಂದರೆ ಸುಗುಣಸಾಮರಸ್ಯ. ಸಮರಸ ಸಂಪೂರ್ಣತೆಯಲ್ಲಿ ಎರಡು ಅತ್ಯುತ್ಕೃಷ್ಟ ಗುಣಗಳು ಸಮ್ಮಿಳಿತ ವಾಗಿರುತ್ತವೆ. ಅವು ಮಾಧುರ್ಯ ಮತ್ತು ಕಾಂತಿ (Sweetness and Light) . . | ಸಂಸ್ಕೃತಿ ಎಂಬುದು ಕಾವ್ಯಕ್ಕೆ ಸಮಾನ ವಾದದ್ದು. ಅದು ಕಾವ್ಯವನುಸರಿಸುವ ಧರ್ಮವನ್ನು ಅನು ಸರಿಸತಕ್ಕದ್ದು: ಒಂದು ಸುಂದರಜೀವನದ ಭಾವನೆ ಮತ್ತು ಅದಕ್ಕನುಸಾರವಾಗಿ ಮನುಷ್ಯಸ್ವಭಾವದ ಸರ್ವತೋಮುಖ ವಾದ ಗುಣಸಂಪಾದನೆ—ಇದು ಕಾವ್ಯದ ಪ್ರಧಾನತತ್ತ್ವ. ಸಂಸ್ಕೃತಿಯದೂ ಅದೇ." |

ಇದು ಮ್ಯಾತ್ಯು ಆರ್ನಾಲ್ಡನ ಮತ. ಇದನ್ನು ಒಂದು ಪ್ರಮಾಣವಾಕ್ಯವೆಂದು ನಾವು ಅಂಗೀಕರಿಸಬಹುದು.

ಸಂಸ್ಕೃತಿ ಎಂಬ ಮಾತು ಕನ್ನಡಕ್ಕೆ ಹೊಸದೆಂದು ಹೇಳಿ ದೆವು. ಆದರೆ ಆ ಮಾತಿನಿಂದ ಸೂಚಿತವಾಗುವ ವಸ್ತು ನಮಗೆ ಹೊಸದೇನೂ ಅಲ್ಲ. ಅದು ನಮಗೆ ವೇದಗಳಷ್ಟು, ರಾಮಾಯಣ ಭಾರತಗಳಷ್ಟು ಪುರಾತನವಾದದ್ದು. ಉಪನಯನಾದಿ ಸಂಸ್ಕಾರ ಗಳಲ್ಲಿ ವಿನಿಯುಕ್ತವಾಗುವ ಮಂತ್ರಗಳೂ ಉಪದೇಶಗಳೂ ಸಂಸ್ಕೃತಿಯ ಸ್ವರೂಪವನ್ನು ತೋರಿಸುತ್ತವೆ. ಶ್ರೀಮದ್ರಾಮಾ ಯಣದ ಕಥಾನಾಯಕನೂ ಭಾರತದಲ್ಲಿಯ ಯುಧಿಷ್ಠಿರನೂ ಸಂಸ್ಕೃತಿಗೆ ಆದರ್ಶಪುರುಷರು. ಇಂಗ್ಲಿಷ್ ಜನರು ಯಾರ ನಡೆ ನುಡಿಗಳನ್ನಾದರೂ ಮನಸಾರ ಮೆಚ್ಚಿದಾಗ ಆತನನ್ನು 'ಜೆಂಟ್ಲ್ ಮನ್' (Gentleman) ಎನ್ನುತ್ತಾರೆ. ಆ ಮಾತಿನಲ್ಲಿ (Honourable) ಗೌರವಾರ್ಹ, (Generous) ಉದಾರ, (Noble) ಘನತೆವೆತ್ತ, ಉದಾತ್ತ, (Courteous) ವಿನಯ ಶೀಲ—ಈ ಎಲ್ಲ ಭಾವಗಳೂ ಸೇರಿಕೊಂಡಿವೆ. ಅದರಂತೆಯೇ

ನಮ್ಮ ಬಳಕೆಯ ಮೆಚ್ಚಿನ ಮಾತುಗಳು—ಸುಸಂಸ್ಕೃತ, ಸುಶಿಕ್ಷಿತ, ಸಭ್ಯ, ಸಜ್ಜನ, ಸದ್ಗೃಹಸ್ಥ, ಮಾನಿಷ್ಠ, ಮರ್ಯಾದೆವಂತ, ಸಂಭಾವಿತ, ದೊಡ್ಡಮನುಷ್ಯ ಮೊದಲಾದುವು—ಸಂಸ್ಕೃತಿಯ ಸ್ವಭಾವವನ್ನು ಸೂಚಿಸುತ್ತವೆ. ರಾಮ ಧರ್ಮರಾಯರುಗಳು ಹುಟ್ಟಿನಿಂದ ದೊಡ್ಡಮನುಷ್ಯರು ("ಬಾರ್ನ್ ಜೆಂಟ್ಲ್‌ಮನ್").

## 'ಜೆಂಟ್ಲ್‌ಮನ್' ಎಂಥವನು?

ನ್ಯೂಮನ್ (Cardinal Newman) ಎಂಬ ಆಂಗ್ಲೇಯ ದೈವಮತಾಚಾರ್ಯನು ಕೊಟ್ಟಿರುವ 'ಜೆಂಟ್ಲ್‌ಮನ್' ಶಬ್ದಾರ್ಥ ವಿವರಣೆಯು ಪ್ರಸಿದ್ಧವಾದದ್ದು. ಅದು ಹೀಗಿದೆ:—

"ನಿಜವಾಗಿ ದೊಡ್ಡಮನುಷ್ಯನಾದವನು (ಜೆಂಟ್ಲ್‌ಮನ್) ಯಾರ ಸಹವಾಸದಲ್ಲಿ ತಾನು ಬದುಕಬೇಕಾಗಿರುತ್ತದೆಯೋ ಅವರ ಮನಸ್ಸಿಗೆ ವಿರಸವನ್ನಾಗಲಿ ಕುಲುಕಾಟವನ್ನಾಗಲಿ ಉಂಟುಮಾಡಬಹುದಾದ ಸಂದರ್ಭಗಳನ್ನು ತಪ್ಪಿಸಲು ಎಚ್ಚರದಿಂದಿರುತ್ತಾನೆ. ಪ್ರತಿಯೊಬ್ಬರೂ ಸಮಾಧಾನದಿಂದ ಅವರವರ ಸ್ವಗೃಹದಲ್ಲಿ ಹೇಗೋ ಹಾಗೆ ಇರುವಂತೆ ಅನುಕೂಲಪಡಿಸಬೇಕೆಂಬುದೇ ಆತನ ಮುಖ್ಯ ಯೋಚನೆ. ಗೋಷ್ಠಿಯಲ್ಲಿ ಎಲ್ಲರ ಕಡೆಗೂ ಆತನ ಕಣ್ಣಿರುತ್ತದೆ; ನಾಚಿಕೆಯ ಸ್ವಭಾವದವರ ವಿಷಯದಲ್ಲಿ ಆತನು ಮೃದುವಾಗಿಯೂ, ಸಲಿಗೆಯಿಲ್ಲದೆ ದೂರ ನಿಂತವರಲ್ಲಿ ನಯದಿಂದಲೂ, ಅವಿವೇಕಿಗಳಲ್ಲಿ ಮರುಕದಿಂದಲೂ ನಡೆದುಕೊಳ್ಳುತ್ತಾನೆ. ಆತನು ಸಂಭಾಷಣೆಯಲ್ಲಿ ಅಕಾರಣ ಪ್ರಸ್ತಾವಗಳೂ ಉದ್ರೇಕಕರಗಳಾದ ಸಂಗತಿಗಳೂ ಬಾರದಂತೆ ನೋಡಿಕೊಳ್ಳುತ್ತಾನೆ. ಮಾತುಕಥೆಯಲ್ಲಿ ತಾನು ಪ್ರಮುಖನಾಗಿ ಮುಂದೆ ಬರುವುದೂ, ಬೇಸರಪಡಿಸುವಂತೆ ಮಾತನಾಡುವುದೂ ಎಂದಿಗೂ ಇಲ್ಲ. ತಾನು ಇತರರಿಗೆ ಉಪಕಾರ

ಮಾಡಿದಾಗ ಅದು ಸ್ವಲ್ಪವೆನಿಸುವಂತೆ ನಡೆದುಕೊಳ್ಳುತ್ತಾನೆ. ಕೊಡುವವನು ತಾನಾಗಿದ್ದರೂ ಸ್ವೀಕರಿಸುವವನು ತಾನೆಂಬಂತೆ ನಡೆಯುತ್ತಾನೆ. ಒತ್ತಾಯವಿದ್ದ ಹೊರತು ತನ್ನ ವಿಷಯವನ್ನು ತಾನು ಹೇಳಿಕೊಳ್ಳುವುದಿಲ್ಲ. ವಾದದಲ್ಲಿ ಆತನು ಎಂದಿಗೂ ಪ್ರತ್ಯಾಕ್ಷೇಪಣೆಯಿಂದ ಸ್ವಸಮರ್ಥನೆ ಮಾಡಿಕೊಳ್ಳಲಾರ. ಚಾಡಿಮಾತಿಗೂ ಗೊಡ್ಡು ಹರಟೆಗೂ ಆತನು ಕಿವಿಕೊಡಲಾರ. ತನ್ನ ದಾರಿಗೆ ಅಡ್ಡಬಂದವರ ವಿಷಯದಲ್ಲಿ ದುರುದ್ದೇಶವನ್ನಾ ರೋಪಿಸತಕ್ಕದ್ದಲ್ಲವೆಂದು ಆತನು ನಿಯಮವಿಟ್ಟುಕೊಂಡಿರು ತ್ತಾನೆ. ಪ್ರತಿಯೊಂದು ಸಂದರ್ಭಕ್ಕೂ ಉತ್ತಮವಾದ ಅರ್ಥ ವನ್ನೇ ಹೇಳುತ್ತಾನೆ. ನಮ್ಮ ಇಂದಿನ ಶತ್ರು ಮುಂದೊಂದು ದಿನ ಮಿತ್ರನಾಗಬಹುದೆಂದು ನಮಗೆ ಎನ್ನಿಸಿದ್ದಲ್ಲಿ ನಾವು ಆ ಮನುಷ್ಯನ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತೇವೋ ಹಾಗಿರ ತಕ್ಕದ್ದು ಯುಕ್ತವೆಂದು ಆತನು ದೂರದೃಷ್ಟಿಯ ಜಾಣತನ ದಿಂದ ಕಂಡುಕೊಂಡಿರುತ್ತಾನೆ. ಆತನ ಅಭಿಪ್ರಾಯ ಸರಿಯೋ ತಪ್ಪೋ, ಆತನ ವಿಚಾರ ವಿಶದತೆ ಮಾತ್ರ ಅನ್ಯಾಯ ಮಾಡ ಲಾರದ್ದಾಗಿ ಇರುತ್ತದೆ. ಆತನು ಹೇಗೆ ಶಕ್ತನೋ ಹಾಗೆ ಸರಳನು, ಹೇಗೆ ನಿಷ್ಕರ್ಷೆಯುಳ್ಳವನೋ ಹಾಗೆ ಮಿತಿ ವಂತನು." |

## ವಾಲ್ಮೀಕಿಯ ಉದಾಹರಣೆ

ಸುಸಂಸ್ಕೃತನಾದವನ ಮಾತುಕಥೆ ಹೇಗಿರುತ್ತದೆಂಬುದನ್ನು ರಾಮಾಯಣದಲ್ಲಿ ಅಲ್ಲಲ್ಲಿ ವರ್ಣಿಸಿದೆ. ಅಂಥ ಪ್ರಕರಣಗಳ ಪೈಕಿ ಹನುಮಂತನು ರಾಮಲಕ್ಷ್ಮಣರನ್ನು ಮೊದಲು ಸಂಧಿಸಿದ್ದು ಒಂದು. ಕಿಷ್ಕಿಂಧೆಯ ಬಳಿ ಋಷ್ಯಮೂಕ ಪರ್ವತದ ಹತ್ತಿರ ರಾಮಲಕ್ಷ್ಮಣರಿಬ್ಬರನ್ನೂ ಕಾಣುತ್ತಲೆ ಹನುಮಂತನು ಯತಿ ರೂಪವನ್ನು ತಾಳಿ ಅವರ ಬಳಿಗೆ ಬಂದು, "ನಾನು ಸುಗ್ರೀವನ

ಮಂತ್ರಿ" ಎಂದು ಹೇಳಿಕೊಂಡು ಅವರಿಬ್ಬರ ರೂಪತೇಜಸ್ಸು ಪರಾಕ್ರಮಗಳನ್ನು ಪ್ರಶಂಸೆ ಮಾಡಿ,—"ತಾವಿಬ್ಬರೂ ಯಾರು? ದೇವತೆಗಳಂತೆ ಇದ್ದೀರಿ. ಇಲ್ಲಿಗೆ ಬಂದ ಕಾರ್ಯವೇನು?" ಎಂದು ಮೊದಲಾಗಿ ವಿಚಾರಿಸುತ್ತಾನೆ. ಆ ಆಂಜನೇಯ ಭಾಷಣದ ಸೊಗಸನ್ನು ರಾಮನು ಹೀಗೆ ಕೊಂಡಾಡುತ್ತಾನೆ :—

\ ನೂನಂ ವ್ಯಾಕರಣಂ ಕೃತ್ಸ್ನಮನೇನ ಬಹುಧಾಶ್ರುತಂ |
ಬಹು ವ್ಯಾಹರತಾನೇನ ನ ಕಿಂಚಿದಪಶಬ್ದಿತಂ ||
ಅವಿಸ್ತರಮ್ ಅಸಂದಿಗ್ಧಮ್ ಅವಿಲಂಬಿತಮ್ ಅದ್ರುತಂ |
ಉರಃಸ್ಥಂ ಕಂಠಗಂ ವಾಕ್ಯಂ ವರ್ತತೇ ಮಧ್ಯಮೇ ಸ್ವರೇ ||
ಸಂಸ್ಕಾರ ಕ್ರಮಸಂಪನ್ನಾಮ್ ಅದ್ರುತಾಮ್ ಅವಿಲಂಬಿತಾಂ |
ಉಚ್ಚಾರಯತಿ ಕಲ್ಯಾಣೀಂ ವಾಚಂ ಹೃದಯಹಾರಿಣೀಂ ||

[ಈತನು ವ್ಯಾಕರಣವೆಲ್ಲವನ್ನೂ ಚೆನ್ನಾಗಿ ಸಾಧಿಸಿದ್ದಾನೆ. ಇಷ್ಟು ಮಾತನಾಡಿದ್ದರೂ ಅದರಲ್ಲಿ ಅಪಶಬ್ದ ಒಂದೂ ಇಲ್ಲ. ಮಾತು ಬಹಳ ಉದ್ದವಿಲ್ಲ, ಅದರಲ್ಲಿ ಸಂದೇಹಕ್ಕವಕಾಶವಿಲ್ಲ. ಅತಿ ಸಾವಕಾಶವಿಲ್ಲ, ಅತಿ ವೇಗವಿಲ್ಲ ; ಧ್ವನಿ ಅತಿ ಗಟ್ಟಿಯಲ್ಲ, ಅತಿ ಮೆಲ್ಲನೆ ಅಲ್ಲ, ಮಧ್ಯಮ ಅಂತಸ್ತಿನದು. ವಿಷಯ ನಿರೂಪಣೆಯ ರೀತಿಯಲ್ಲಿ ಒಂದು ಪೂರ್ವಾಲೋಚನೆಯಿಂದ ಗೊತ್ತಾದ ಅನುಕ್ರಮ ತೋರುತ್ತದೆ. ಅವಸರವೂ ಮಂದವೂ ಎರಡೂ ಅಲ್ಲದ ಈ ಮಂಗಳಕರವಾದ ಮಾತು ಹೃದಯವನ್ನು ಸ್ವಾಧೀನಪಡಿಸಿಕೊಳ್ಳಬಲ್ಲದ್ದಾಗಿದೆ.] \

ಈ ವಾಲ್ಮೀಕಿಯ ವಾಕ್ಯಗಳನ್ನು ಮೇಲಣ ನ್ಯೂಮನ್ ವಾಕ್ಯಗಳೊಡನೆ ಕೂಡಿಸಿಕೊಂಡು ನೋಡಿದರೆ ಸುಸಂಸ್ಕೃತನಾದವನ ಭಾವನೆ ಭಾಷಣಗಳ ಲಕ್ಷಣ ನಮ್ಮ ಮನಸ್ಸಿಗೆ ಚೆನ್ನಾಗಿ ಹೊಳೆಯುತ್ತದೆ.

## ಭರ್ತೃಹರಿಯ ಸಂಗ್ರಹವಾಕ್ಯ

ಭರ್ತೃಹರಿಕವಿಯ ಈ ಕೆಳಗಣ ಪದ್ಯ ಸುಸಂಸ್ಕೃತ ಪುರುಷನ ಸ್ವರೂಪಚರ್ಯೆಗಳನ್ನು ಸಂಗ್ರಹವಾಗಿ ತಿಳಿಸುತ್ತದೆ :—

ವಾಂಛಾ ಸಜ್ಜನ ಸಂಗತೌ ಪರಗುಣೇ ಪ್ರೀತಿರ್ಗುರೌ ನಮ್ರತಾ |
ವಿದ್ಯಾಯಾಂ ವ್ಯಸನಂ ಸ್ವಯೋಷಿತಿ ರತಿರ್ಲೋಕಾಪವಾದಾದ್ಭಯಂ ||
ಭಕ್ತಿಃ ಶೂಲಿನಿ ಶಕ್ತಿರಾತ್ಮದಮನೇ ಸಂಸರ್ಗಮುಕ್ತಿಃ ಖಲೈಃ |
ಏತೇ ಯೇಷು ವಸನ್ತಿ ನಿರ್ಮಲಗುಣಾಸ್ತೇಭ್ಯೋ ಮಹದ್ಭ್ಯೋ ನಮಃ ||

ಗುರುವೊಳ್ ನಮ್ರತೆ ವಿದ್ಯೆಯಲ್ಲಿ ಕುತುಕಂ ಸತ್ಸಂಗದೊಳ್ ವಾಂಛೆ ಶಂ |
ಕರನೊಳ್ ಭಕ್ತಿ ಜನಾಪವಾದದೆ ಭಯಂ ಸ್ವಸ್ತ್ರೀಯೊಳಾಸಕ್ತಿ ಮೇಣ್ ||
ಅರಿಯೊಳ್ ಸಾಹಸಮ್ ಒಳ್ಮೆಯನ್ಯಗುಣದೊಳ್ ದುಸ್ಸಂಗದೊಳ್
ವರ್ಜನಂ ||
ತರಿಸಂದಿರ್ಪ್ಪವಿವಾರೊಳ್ ಆ ಸುಜನರಂ ಸಂಪ್ರೀತಿಯಿಂ ವಂದಿಪೆಂ ||

—ಬಸವಪ್ಪ ಶಾಸ್ತ್ರಿಗಳ ಕನ್ನಡ.

ಸಂಸ್ಕೃತಿ ಎಂಬುದು ಒಂದು ಬಗೆಯ ಆತ್ಮಶಿಕ್ಷಣ. ಅದು ಬರಿಯ ಮನಸ್ಸಿನ ವ್ಯಾಪಾರವಲ್ಲ ; ಅಥವಾ ಬರಿಯ ಬುದ್ಧಿಯ ವ್ಯಾಪಾರವಲ್ಲ; ಅಥವಾ ಬರಿಯ ಸ್ಮೃತಿಶಕ್ತಿಯ ವ್ಯಾಪಾರವೂ ಅಲ್ಲ. ಅದು ಮನಸ್ಸು, ಬುದ್ಧಿ, ಸ್ಮೃತಿ—ಇವೆಲ್ಲಕ್ಕೂ ಸ್ವಾಮಿಯಂತಿರುವ ಜೀವಾತ್ಮಕ್ಕೆ ಸೇರಿದ್ದು. ಕಾಡಿನಲ್ಲಿರುವ ಸಂಪಗೆ, ಕೇದಗೆ, ಮಲ್ಲಿಗೆ, ಪಾದರಿ, ಸುರಗಿ, ಹೊನ್ನೆ ಮೊದಲಾದ ನೂರಾರು ಜಾತಿಯ ವನಪುಷ್ಪಗಳ ಸೌರಭಕಣಗಳನ್ನು ಗಾಳಿ ಒಂದಾಗಿ ಬೆರಸಿ, ದೂರದಲ್ಲಿರುವವನಿಗೆ ಹೆಸರಿಸಲಾಗದ ಒಂದು ವಿಜಾತೀಯವಾದ ಪರಿಮಳಭಾರವನ್ನು ಬೀರುತ್ತದೆ. ಕಾಡು ಬೆಟ್ಟಗಳಲ್ಲಿಯ ಹಲವು ಹದಿನಾರು ಮೂಲಿಕೆಗಳ ಸಾರವನ್ನು ವೈದ್ಯನು ಪುಟಪಾಕದಲ್ಲಿರಿಸಿ ಒಂದೇ ಹೊಸ ಸಂಜೀವಿನಿ ರಸವನ್ನಾಗಿ ಇಳಿಸುತ್ತಾನೆ. ಸಂಸ್ಕೃತಿ ಎಂಬುದೂ ಹಾಗೆಯೇ ಸಂಗೀತಸಾಹಿತ್ಯಾದಿ ನಾನಾ ಕಲಾನುಭವಗಳ ಮತ್ತು ನಾನಾ ಶಾಸ್ತ್ರಶಿಕ್ಷಣಗಳ ಫಲಿತಾಂಶಗಳ ಸಾರಸಮ್ಮೇಳನ. ಅದರಲ್ಲಿ ವಿಜ್ಞಾನವೂ ಉಂಟು, ವಿವೇಕವೂ ಉಂಟು, ಔದಾರ್ಯವೂ

ಉಂಟು, ದಾರ್ಢ್ಯವೂ ಉಂಟು, ಬಿಗಿಯೂ ಉಂಟು, ಸಡಿಲವೂ ಉಂಟು.

ಭವಭೂತಿಯ ಈ ವಾಕ್ಯವನ್ನು ಸ್ಮರಿಸೋಣ :—

ವಜ್ರಾದಪಿ ಕಠೋರಾಣಿ
ಮೃದೂನಿ ಕುಸುಮಾದಪಿ |
ಲೋಕೋತ್ತರಾಣಾಂ ಚೇತಾಂಸಿ
ಕೋಹಿ ವಿಜ್ಞಾತುಮರ್ಹತಿ ||

[ಅಸಾಧಾರಣರಾದವರ ಹೃದಯವನ್ನು ಹೇಗೆ ತಾನೆ ಕಂಡುಕೊಳ್ಳಲಾದೀತು ? ಅದು ವಜ್ರಕ್ಕಿಂತಲೂ ಕಠಿನವಾಗಿರುವುದುಂಟು, ಹುವ್ವಿಗಿಂತ ಮೃದುವಾಗಿರುವುದೂ ಉಂಟು.]

ಇದಕ್ಕೆ ಉದಾಹರಣೆಯನ್ನು ವಾಲ್ಮೀಕಿ ಕೊಟ್ಟಿದ್ದಾನೆ :—

ವಿಷ್ಣುನಾ ಸದೃಶೋ ವೀರ್ಯೇ
ಸೋಮವತ್ ಪ್ರಿಯದರ್ಶನಃ |
ಕಾಲಾಗ್ನಿ ಸದೃಶಃ ಕ್ರೋಧೇ
ಕ್ಷಮಯಾ ಪೃಥಿವೀಸಮಃ ||

[ಶ್ರೀರಾಮನು ಪರಾಕ್ರಮದಲ್ಲಿ ವಿಷ್ಣುವಿನಂಥವನು ; ಆದರೂ ಕಣ್ಣಿಗೆ ಚಂದ್ರನಂತೆ. ಕೋಪಗೊಂಡಾಗ ಅವನು ಪ್ರಲಯಾಗ್ನಿ ; ಆದರೆ, ಕ್ಷಮಿಸುವುದರಲ್ಲಿ ಭೂಮಾತೆಯಂತೆ.]

ಹೀಗೆಂದರೇನು ? ಜೀವನವು ಸಾರ್ಥಕಪಡಲು ಬೇಕಾದ ಗುಣಗಳು ಒಂದು ತೆರದುವಲ್ಲ ; ಅವು ನಾನಾಪ್ರಕಾರದುವು. ಅವು ಮೇಲ್ನೋಟಕ್ಕೆ ಅನ್ಯೋನ್ಯ ವಿರೋಧಿಗಳಾಗಿ ಕಾಣಬಹುದು. ಆದರೆ ಅವುಗಳನ್ನು ಒಟ್ಟುಗೂಡಿಸಿ ಸಮನ್ವಯ ಮಾಡುವ ಕ್ರಮವೊಂದುಂಟು. ಆ ಸಮರಸಸ್ಥಿತಿಯಲ್ಲಿ ಅವು ಪರಸ್ಪರ ಸಹಕಾರಿಗಳೇ ಆಗುತ್ತವೆ.

ಕ್ರೋಧವೂ ಕ್ಷಮೆಯೂ ಆಪಾತತಃ ಬೆಂಕಿ ನೀರುಗಳಂತೆ ಪರಸ್ಪರ ಅಸಂಮತಗಳು; ಒಟ್ಟುಗೂಡಿರತಕ್ಕುವಲ್ಲ. ಆದರೆ ಮಹಾಪುರುಷನಲ್ಲಿ ಅವೆರಡೂ ಪಕ್ಕಪಕ್ಕದಲ್ಲಿ ಇರತಕ್ಕುವೇ. ಕ್ರೋಧವು ಅವನಿಗೆ ನ್ಯಾಯವೆನಿಸಿದಾಗ ಕ್ಷಮೆ ಸದ್ದಿಲ್ಲದೆ ಹಿಂದಕ್ಕೆ ಸರಿಯುತ್ತದೆ; ಕ್ಷಮೆ ಕರ್ತವ್ಯವಾದಾಗ ಕ್ರೋಧ ತಲೆಬಾಗಿಸಿ ಅಡಗಿಕೊಳ್ಳುತ್ತದೆ. ಔಚಿತ್ಯಾಭ್ಯಾಸದಿಂದಲೇ ಆ ನಾನಾ ಗುಣಗಳಿಗೆ ಸಾರ್ಥಕತೆ. ಔಚಿತ್ಯದ ಮೇರೆಯನ್ನು ಮೀರಿದ ಸುಗುಣ—ಅದು ಬೇರೆಯಾಗಿದ್ದಾಗ ಎಷ್ಟೇ ಬೆಲೆಯುಳ್ಳದ್ದಾದರೂ—ಕಾರ್ಯವ್ಯವಹಾರದ ವೇಳೆಯಲ್ಲಿ ಅನರ್ಥಕಾರಿಯೇ ಆದೀತು. ಇಂಥ ವಿವೇಕಜನಿತವಾದ ಔಚಿತ್ಯಜ್ಞಾನವೇ ಮತ್ತು ಔಚಿತ್ಯಾನುವರ್ತಿಯಾದ ಗುಣಾಭಿವ್ಯಕ್ತಿಯ ಪರಿಮಿತಿನಯವೇ ಸಂಸ್ಕೃತಿಧರ್ಮ.

ಸಂಸ್ಕೃತಿ ಎಂದರೆ ಜೀವನಕ್ರಿಯೆಗಳಲ್ಲಿ ಔಚಿತ್ಯಸಂಪಾದನೆ ಎಂದೆವು; ಅದು ವಿವಿಧಗುಣ ಸಾಮರಸ್ಯ ಎಂದೆವು; ಅದು ನಾನಾ ವಸ್ತು ನಾನಾ ಬಾಂಧವ್ಯಗಳಲ್ಲಿ ತಾರತಮ್ಯ ವಿವೇಕ ಎಂದೆವು. ಆ ಔಚಿತ್ಯವೆಂಬುದಕ್ಕೆ ನಿರ್ದೇಶಸೂತ್ರ ಯಾವುದು? ಆ ಗುಣಸಮನ್ವಯಕ್ಕೆ ಆದರ್ಶ ಯಾವುದು? ಆ ತಾರತಮ್ಯ ಗಣನೆಯಲ್ಲಿ ಮೂಲ್ಯನಿರ್ಣಯಕ್ರಮ ಯಾವುದು?

---

## ತಾರತಮ್ಯಪ್ರಮಾಣ

ಲೋಕದಲ್ಲಿ ಯಾವ ಒಂದು ಪದಾರ್ಥದ ಬೆಲೆಯನ್ನು ನಾವು ಗೊತ್ತುಮಾಡಬೇಕಾದರೂ ಅದಕ್ಕೆ ಯಾವುದೋ ಒಂದು ಸರ್ವಾನುಭವಸಿದ್ಧವಾದ ಸಂಗತಿಯನ್ನು ಮೂಲಮಾಪಕವನ್ನಾಗಿ ಇಟ್ಟುಕೊಳ್ಳುತ್ತೇವೆ. ಕಾಲವನ್ನಳೆಯುವಾಗ ಕಣ್ಣು

ರೆಪ್ಪೆಯ ಬಡಿತ (ನಿಮಿಷ) ಆ ಆದಿಮಾಪಕವಾಗುತ್ತದೆ. ದೂರ ವನ್ನಳೆಯುವಲ್ಲಿ ಕಾಲಿನ ಅಡಿಯೋ ಕೈಬೆರಳಿನ ಒಂದು ವಿಭಾಗವೋ (ಅಂಗುಲ) ಆ ಮಾಪಕವಾಗುತ್ತದೆ. ಅಕ್ಕಿಯನ್ನಳೆಯು ವಲ್ಲಿ ಕೈಹಿಡಿ ಮಾಪಕವಾಗುತ್ತದೆ. ಚಿನ್ನ ತೂಕಮಾಡುವಲ್ಲಿ ಗುಲಗುಂಜಿ ಮಾಪಕವಾಗುತ್ತದೆ. ಹಣವನ್ನು ಎಣಿಸುವುದರಲ್ಲಿ ಒಂದು ಕಾಸೋ ಅಥವಾ ಬೇರೊಂದು ಕನಿಷ್ಠಾಂಶದ ನಾಣ್ಯವೋ ಮಾಪಕವಾಗುತ್ತದೆ. ಹಾಗಾದರೆ ಸಂಸ್ಕೃತಿಯ ಬಗ್ಗೆ ಔಚಿತ್ಯವನ್ನು ಗೊತ್ತುಮಾಡಲು ಮೂಲಮಾಪಕ ಯಾವುದು? ನಾನಾಗುಣಗಳನ್ನು ಸರಿಯಾಗಿ ಬೆರಸಬೇಕೆಂಬುದರಲ್ಲಿ ಅವುಗಳನ್ನು ತೂಕಮಾಡಲು ತ್ರಾಸಿನ ಬಟ್ಟು ಯಾವುದು? ನಡವಳಿಕೆಗಳ ಯುಕ್ತಾಯುಕ್ತತೆಗಳಿಗೆ ಅಳೆಗೋಲು ಯಾವುದು?

ಒಟ್ಟಿನಲ್ಲಿ ಔಚಿತ್ಯವೆಂದರೆ ಒಳ್ಳೆಯದೆಂಬುದರ ಅತ್ಯಂತ ಉತ್ಕೃಷ್ಟಸ್ಥಿತಿ.—ಒಳ್ಳೆಯದು, ಹಿತ, ಶುಭ, ಶ್ರೇಯಸ್ಸು ಇಂಥ ಪದಗಳನ್ನು ನಾವು ಧಾರಾಳವಾಗಿ ಉಪಯೋಗಿಸುತ್ತೇವೆ. ಆ ಒಳ್ಳೆಯದು ಅಥವಾ ಹಿತವಾದದ್ದು ಎಂಬುದನ್ನು ಗೊತ್ತು ಮಾಡುವುದು ಹೇಗೆ? ಅದರ ಲಕ್ಷಣವೇನು? ಅದಕ್ಕೆ ಪ್ರಮಾಣ ಯಾವುದು?

ನಮ್ಮ ಪೂರ್ವಿಕರು ಈ ಪ್ರಶ್ನೆಯನ್ನು ತಳಮುಟ್ಟ ಶೋಧಿಸಿ ನೋಡಿದ್ದಾರೆ. \ಯಾವುದು ಸತ್ಯವೋ ಅದೇ ಒಳ್ಳೆಯದರಲ್ಲೆಲ್ಲಾ ಒಳ್ಳೆಯದು.\ ಯಾವುದು ಶಾಶ್ವತವೋ ಅದೇ ಹಿತಗಳಲ್ಲೆಲ್ಲಾ ಹಿತ—ಹೀಗೆಂಬುದು ಅವರ ಸಿದ್ಧಾಂತ.]

ಸಂಸ್ಕೃತಭಾಷೆಯಲ್ಲಿ "ಸತ್" ಎಂದರೆ (೧) "ಇರತಕ್ಕದ್ದು" (೨) "ಒಳ್ಳೆಯದು" ಎಂದು ಎರಡರ್ಥ. ಕನ್ನಡದ "ಒಳ್ (ಉಳ್)" ಎಂಬುದಕ್ಕೂ ಹಾಗೆ (೧) "ಉಂಟಾ

ಗಿರು" (೨) "ಒಳ್ಳೆಯದಾಗು" ಎಂದು ಎರಡರ್ಥ. ಯಾವುದು ಅಳಿಯದೆ ಬಾಳಬಲ್ಲದ್ದೋ ಅದೇ ನಿಜವಾಗಿ ಒಳ್ಳೆಯದು.

"ಸತ್"ತ್ವದಿಂದ ಸತ್ಯ; "ಸತ್"ತ್ವದಿಂದಲೇ ಸತ್ತ್ವ.

ಸತ್ಯಗಳಲ್ಲೆಲ್ಲಾ ಪರಮಸತ್ಯವಾದದ್ದು ಪರಾತ್ಪರವಸ್ತು. ಅದೇ ಪರಮಾತ್ಮ ಅಥವಾ ಪರಬ್ರಹ್ಮ. ಅದೇ ಸರ್ವಕಾಲಗಳಲ್ಲೂ ಸರ್ವಾವಸ್ಥೆಗಳಲ್ಲೂ ಅಬಾಧಿತವಾಗಿ, ಏಕಾಕಾರವಾಗಿ, ಅನಂತವಾಗಿ, ಶಾಶ್ವತವಾಗಿರತಕ್ಕ ವಸ್ತು. ಆದದ್ದರಿಂದ ನಮ್ಮ ಜಗದ್ವ್ಯಾಪಾರಗಳಲ್ಲಿಯೂ ಜಗದ್ವೈಭವಗಳಲ್ಲಿಯೂ ಯಾವ ಯಾವುದು ಎಷ್ಟೆಷ್ಟು ಮಟ್ಟಿಗೆ ಪರಮಾತ್ಮವಸ್ತುವಿಗೆ ಸಮೀಪವಾಗಿರುತ್ತದೆಯೋ ಅಷ್ಟಷ್ಟು ಮಟ್ಟಿಗೆ ಆಯಾ ಸಂಗತಿ ನಮಗೆ ನಿಜವಾದ ಹಿತವನ್ನು ಮಾಡಬಲ್ಲದ್ದಾಗುತ್ತದೆ. ಯಾವ ಯಾವುದು ನಮ್ಮನ್ನು ಪರಮಾತ್ಮಸ್ಮರಣೆಯಿಂದ ದೂರ ಮಾಡೀತೋ ಅದು ಅಷ್ಟಷ್ಟು ಮಾತ್ರ ನಮಗೆ ಅಹಿತವಾಗುತ್ತದೆ. ಹೀಗೆ ಹಿತಾಹಿತ ನಿರ್ಣಯಕ್ಕೆ ಮೂಲಮಾಪನವು ಪರವಸ್ತುದೃಷ್ಟಿ.

ಮನುಷ್ಯನಿಗೆ ಗೊತ್ತಿರುವ ವಸ್ತುಗಳಲ್ಲೆಲ್ಲ ಅವನ ಅಂತರಾತ್ಮವೇ ಅವನ ಪಾಲಿಗೆ ಸರ್ವಸತ್ಯ. ಅವನಿಗೆ ಎಲ್ಲಕ್ಕಿಂತ ಮೊದಲು ನಿಸ್ಸಂಶಯವಾಗಿ ತಿಳಿದಿರುವುದು "ನಾನು," "ನಾನು" ಎಂದುಕೊಳ್ಳುತ್ತಿರುವ ತನ್ನಾತ್ಮ; ಮತ್ತು ಅವನ ಎಲ್ಲ ತಿಳಿವಿಗೂ ಆಧಾರವಾದದ್ದು ಆ ಆತ್ಮವೇ. ಆತ್ಮದಿಂದಲೇ ಜೀವನ; ಆತ್ಮವೇ ಜೀವ; ಜೀವದಿಂದಲೇ ಜಗತ್ತು. ಹೀಗೆ ಜೀವಾತ್ಮವು ಮನುಷ್ಯನ ಇರುವಿಕೆಗೆ ಮೂಲ; ಅದೇ ಅವನ ಬಾಳುವೆಗೆ ಮೊದಲು; ಅದೇ ಅವನ ಎಲ್ಲ ವ್ಯಾಪಾರಗಳಿಗೂ ಸಾಧನ. ಅವನ ಅನುಭವದಲ್ಲಿರುವ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಅದೇ ಬದಲಾಯಿಸದೆ ದೃಢವಾಗಿರುವಂಥಾದ್ದು. ಆದದ್ದ

ರಿಂದ ಆ ಆತ್ಮವೇ ಅವನ ಪಾಲಿಗೆ ಶಾಶ್ವತ. ಅದೇ ಸದ್ವಸ್ತು. ಈ ಕಾರಣದಿಂದಲೇ ವೇದವು—

ಆತ್ಮಾ ಹಿ ವರಃ ||

—ತೈ. ಬ್ರಾಹ್ಮಣ

ತದಾತ್ಮಾನಂ ಸ್ವಯಮಕುರುತ |
ತಸ್ಮಾತ್ತತ್ಸುಕೃತಮುಚ್ಯತೇ ||

—ತೈತ್ತಿರೀಯ

ಆತ್ಮಾಸ್ಯ ಜನ್ತೋರ್ನಿಹಿತಂ ಗುಹಾಯಾಮ್ ||
ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ||

—ಕಠ

ಆತ್ಮಾ ವಾ ಅರೇ ದ್ರಷ್ಟವ್ಯಃ ||

—ಬೃಹದಾರಣ್ಯಕ

—ಇತ್ಯಾದಿ ವಾಕ್ಯಗಳಿಂದ ಆತ್ಮವಸ್ತುವನ್ನು ಎಲ್ಲಕ್ಕಿಂತ ದೊಡ್ಡದೆಂದು ಹೇಳಿದೆ. ಅದನ್ನನುಸರಿಸಿಯೇ ಸ್ಮೃತಿ ಪ್ರವರ್ತಕರಾದ ಆಪಸ್ತಂಬ ಮಹರ್ಷಿಗಳು—

/ ಆತ್ಮಲಾಭಾನ್ನ ಪರಂ ವಿದ್ಯತೇ

—"ಆತ್ಮಜ್ಞಾನಕ್ಕಿಂತ ಹೆಚ್ಚಿನ ಲಾಭವಾವುದೂ ಇರದು" ಎಂದು ಸಿದ್ಧಾಂತಮಾಡಿದ್ದಾರೆ.

ಹೀಗೆ ಆತ್ಮವೇ,—ಆತ್ಮೈಕ ದೃಷ್ಟಿಯೇ—ಆತ್ಮ ಸಾಕ್ಷಾತ್ಕಾರ ಸೌಲಭ್ಯವೇ—ಜಗತ್ತಿನ ಎಲ್ಲ ವಸ್ತುಗಳ, ಎಲ್ಲ ವೈಭವಗಳ ವಿಷಯದಲ್ಲಿಯೂ, ನಮ್ಮೆಲ್ಲ ಆಶೆಗಳ ಎಲ್ಲ ಅನುಭವಗಳ ವಿಷಯದಲ್ಲಿಯೂ, ನಮಗೆ ಮೂಲ್ಯ ತಾರತಮ್ಯವನ್ನು ನಿರ್ಧರಿಸುವ ಮಾಪಕವಾಗಿರಬೇಕಾದದ್ದು. ಅಂತರಾತ್ಮ ಶುಭವೇ ಧರ್ಮಕ್ಕೆ ಪ್ರಮಾಣ. ಅದೇ ಸಂಸ್ಕೃತಿ ಬೀಜ.

# ಪುರುಷಾರ್ಥಯೋಜನೆ

ಈ ತತ್ತ್ವವನ್ನನುಸರಿಸಿ ಆಗಿರುವುದು ನಮ್ಮ ಪೂರ್ವಿಕರ ಚತುರ್ವಿಧ ಪುರುಷಾರ್ಥಯೋಜನೆ. ಪುರುಷಾರ್ಥವೆಂದರೆ ಮನುಷ್ಯನ ಇಷ್ಟ ಅಥವಾ ಉದ್ದೇಶ. ಅವನು ಯಾವುದನ್ನು ಒಳ್ಳೆಯದು, ಬೆಲೆಯುಳ್ಳದ್ದು, ಎಂದು ತಿಳಿದುಕೊಂಡಿರುತ್ತಾನೋ ಅದು "ಅರ್ಥ." ಅದನ್ನು ಇಂಗ್ಲಿಷಿನಲ್ಲಿ "ವ್ಯಾಲ್ಯು" (ಮೂಲ್ಯ, ಬೆಲೆ) ಎಂದು ಕರೆಯುತ್ತಾರೆ. ಮನುಷ್ಯನ ಯಾವ ಒಂದು ಉದ್ದೇಶವಾಗಲಿ ಉದ್ಯಮವಾಗಲಿ ಅದು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಜಾತಿಯ ಪ್ರಯೋಜನಗಳ, ಅಥವಾ ಮೂಲ್ಯಗಳ, ಅಥವಾ ಬೆಲೆಗಳ ಪೈಕಿ ಒಂದರಲ್ಲಿ ಎಣಿಕೆಗೆ ಬರತಕ್ಕದ್ದಾಗಿರುತ್ತದೆ. ಲೋಕಸಂಸ್ಥಿತಿಗಾಗಿಯೂ ಪರಲೋಕ ಸದ್ಗತಿಗಾಗಿಯೂ ಮಾಡುವ ಕೆಲಸಗಳೂ ನಡೆಯುವ ನಡವಳಿಕೆಗಳೂ "ಧರ್ಮ." ಸಂಸಾರ ಸಮಾಜಗಳ ಕರ್ತವ್ಯಗಳೆಲ್ಲ ಧರ್ಮವೇ. ಆ ಬಗ್ಗೆ ಬೇಕಾದ ಸಾಧನಸಾಮಗ್ರಿಯ—ಧನಧಾನ್ಯಾದಿಗಳ—ಸಂಪಾದನೆಯೇ ಅರ್ಥ. ತನ್ನಲ್ಲಿ ಸಹಜವಾಗಿರುವ ಬಗೆಬಗೆಯ ಆಶೆಗಳೇ ಕಾಮ. ಕಾಮನೆಗಳೆಲ್ಲ ಕಳೆದು, ತಾನು ನಿರ್ಮಲನಾಗಿ, ಪರಮಾತ್ಮ ಸಂದರ್ಶನವನ್ನು ಪಡೆದು ನಿಶ್ಚಿಂತನಾಗುವುದೇ ಮೋಕ್ಷ. ಈ ನಾಲ್ಕು ತೆರದ ಜೀವನಪ್ರವೃತ್ತಿಗಳಲ್ಲಿ—ಅವು ಅಂತರಾತ್ಮಸ್ಮರಣೆಯ ಹಿಡಿತದಲ್ಲಿದ್ದಲ್ಲಿ—ಯಾವುದೂ ದೂಷ್ಯವಲ್ಲ, ಎಲ್ಲವೂ ಗ್ರಾಹ್ಯಗಳೇ. ಆದರೆ ಅವು ಸಮನ್ವಯಸ್ಥಿತಿಯಲ್ಲಿರಬೇಕು. ಮಹಾಭಾರತದಲ್ಲಿ ಹೀಗೆ ಹೇಳಿದೆ:—

> ಧರ್ಮಾರ್ಥೌ ಧರ್ಮಕಾಮೌ ಚ ಕಾಮಾರ್ಥೌ ಚಾಪ್ಯಪೀಡಯನ್ |
> ಧರ್ಮಾರ್ಥಕಾಮಾನ್ಯೋಽಭ್ಯೇತಿ ಸೋಽತ್ಯಂತಂ ಸುಖಮಶ್ನುತೇ ||

[ಧರ್ಮಕ್ಕೂ ಅರ್ಥಕ್ಕೂ ಆಗಲಿ, ಧರ್ಮಕ್ಕೂ ಕಾಮಕ್ಕೂ ಆಗಲಿ, ಕಾಮಕ್ಕೂ ಅರ್ಥಕ್ಕೂ ಆಗಲಿ ಪರಸ್ಪರ ಪೀಡೆಯಾಗದಂತೆ ಯಾರು ಧರ್ಮ

ಅರ್ಥ ಕಾಮಗಳೆಂಬ ತ್ರಿವರ್ಗಗಳನ್ನೂ ಸೇವಿಸುತ್ತಾನೋ ಅವನು ಅತ್ಯಂತ ಹೆಚ್ಚಿನ ಸುಖವನ್ನು ಪಡೆಯುತ್ತಾನೆ.]

ಧರ್ಮಂ ಪೂರ್ವೇ ಧನಂ ಮಧ್ಯೇ
ಜಘನ್ಯೇ ಕಾಮಮಾಚರೇತ್ |
ಅಹನ್ಯನುಚರೇದೇವಮ್
ಏಷ ಶಾಸ್ತ್ರಕೃತೋ ವಿಧಿಃ ||

[ಮೊದಲು ಧರ್ಮವನ್ನು, ಎರಡನೆಯದಾಗಿ ಅರ್ಥ (ಹಣ)ವನ್ನು, ಕಡೆಯದಾಗಿ ಭೋಗವನ್ನು ಸಾಧಿಸತಕ್ಕದ್ದು. ಇದು ಅನುದಿನಕ್ಕೂ ಇರುವ ಶಾಸ್ತ್ರವಿಧಿ.]

( ಧರ್ಮಾರ್ಥಕಾಮಾಃ ಸಮಮೇವ ಸೇವ್ಯಾ |
ಯೋಹ್ಯೇಕಭಕ್ತಃ ಸ ನರೋ ಜಘನ್ಯಃ ||
ದ್ವಯೋಸ್ತು ದಾಕ್ಷ್ಯಂ ಪ್ರವದನ್ತಿ ಮಧ್ಯಂ |
ಸ ಉತ್ತಮೋ ಯೋऽಭಿರತಸ್ತ್ರಿವರ್ಗೇ ||

[ಧರ್ಮ ಅರ್ಥ ಕಾಮಗಳನ್ನು ಸಮಸಮವಾಗಿ ಸೇವಿಸಬೇಕು. ಆ ಮೂರರಲ್ಲಿ ಯಾವುದಾದರೊಂದಕ್ಕೆ ಮಾತ್ರ ಅಂಟಿಕೊಂಡಿರುವವನು ಅಧಮನು ; ಎರಡರಲ್ಲಿ ಮಾತ್ರ ಸಮರ್ಥನಾದವನು ಮಧ್ಯಮನು ; ಯಾರು ಆ ತ್ರಿವರ್ಗಗಳಲ್ಲೂ ನಿರತನೋ ಅವನೇ ಉತ್ತಮನು.] |

ಇಲ್ಲಿ ಮೋಕ್ಷದ ಪ್ರಸ್ತಾವ ಸ್ಫುಟವಾಗಿಲ್ಲ, ಆದರೆ ಅಂತರ್ಗತವಾಗಿದೆ. ಮೋಕ್ಷವು ಲೋಕಾತೀತ ಪ್ರಕರಣ. ಯಾರು ಲೌಕಿಕ ವಿಷಯಗಳಿಂದ ಪುರುಷಾರ್ಥ ತ್ರಯದಲ್ಲಿ ಕೃತಕೃತ್ಯನಾಗಿದ್ದಾನೋ ಅವನಿಗೆ ಮೋಕ್ಷ ತಾನಾಗಿ ಸಿದ್ಧವಾಗಿರುತ್ತದೆ. ನೆಲದೊಳಗೆ ಹೂತುಹೋಗಿರುವ ರತ್ನಾಭರಣದ ಮೇಲಿನ ಮಣ್ಣನ್ನೆಲ್ಲ ತೆಗೆದು ತೊಳೆದಾಗ ಅದು ತಾನಾಗಿ ಪ್ರಕಾಶಿಸುತ್ತದೆ. ಅದರ ಪ್ರಕಾಶಕ್ಕಾಗಿ ಬೇರೆ ಶ್ರಮ ಅವಶ್ಯವಿಲ್ಲ. ಆದರಂತೆ ತ್ರಿವರ್ಗದ್ವಾರಾ ಆದ ಲೋಕಸಂಸರ್ಗವು ಜೀವ

ವನ್ನು ತೊಳೆದು ಶುದ್ಧಿಪಡಿಸುತ್ತದೆ. ಆಗ ಅಂತರಾತ್ಮ ಸಂದರ್ಶನ ಸ್ವತ ಏವ ಆಗುತ್ತದೆ.

ಮನುಷ್ಯನ ಅನುಭವಕ್ಕೂ ಊಹೆಗೂ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಗೋಚರಿಸಿರುವ ವಸ್ತುಗಳಲ್ಲೆಲ್ಲ ಚಕ್ರವರ್ತಿಯಂತೆ ಇರತಕ್ಕದ್ದು ಆತ್ಮವಸ್ತು. ಅದರ ಪರಿಪೂರ್ಣ ಸಂದರ್ಶನವೇ ಅವನಿಗಾಗಬಹುದಾದ ಉತ್ತಮೋತ್ತಮಸಿದ್ಧಿ. ಆ ದರ್ಶನಕ್ಕಾಗಿ ಮಾಡುವ ಯಾತ್ರೆಯಿಂದ ಅವನ ಜೀವನ ಸಾರ್ಥಕ. ಆ ಯಾತ್ರಾಮಾರ್ಗದ ಎರಡಂಚುಗಳೇ ಪ್ರವೃತ್ತಿ ಧರ್ಮ ನಿವೃತ್ತಿಧರ್ಮಗಳು. ಕುಟುಂಬ, ಕುಲ, ಉದ್ಯೋಗ, ರಾಜ್ಯ ಮೊದಲಾದ ಲೋಕಸಂಸರ್ಗಕ್ಷೇತ್ರಗಳಲ್ಲಿ ಅವನಿಗಾಗುವ ಶಾಸನಶಿಕ್ಷಣಗಳೇ ಪ್ರವೃತ್ತಿಧರ್ಮ. ಶೌಚ, ದಾನ, ಇಂದ್ರಿಯನಿಗ್ರಹ, ಪೂಜೆ, ಧ್ಯಾನ, ವಿರಕ್ತಿ ಮೊದಲಾದ ಅಂತಃಕರಣ ವ್ರತಗಳೇ ನಿವೃತ್ತಿಧರ್ಮ. ಈ ನಿವೃತ್ತಿಧರ್ಮದ ಅನೇಕ ರೂಪಗಳು ಇಂದಿನ ಸ್ಥೂಲದೃಕ್ಕುಗಳಿಗೆ ಅರ್ಥವಾಗುವುದಿಲ್ಲ. ಉಪವಾಸಮಾಡಿದರೆ ಏನು ಬರುತ್ತದೆ?—ಎನ್ನುತ್ತಾರೆ ಅವರು. ಭಕ್ತರು ಭಜನೆಯೆಂದು ಕಿರಿಚಾಡಲಿಕ್ಕೆ ದೇವರೇನು ಕಿವುಡನೆ?—ಎನ್ನುತ್ತಾರೆ ಅವರು. ಜೀವದ ಕಳವಳಗಳನ್ನು ಅವರು ಕಾಣರು. ಜೀವಕ್ಕೆ ಧೈರ್ಯಬಲಗಳನ್ನು ತರುವುದೆಂತು ಎಂಬುದನ್ನವರರಿಯರು. ಅಧ್ಯಾತ್ಮ ವ್ಯವಸಾಯದ ಮರ್ಮಗಳು ಈ ಕಾಲದ ಹಲಮಂದಿಗೆ—ಅದರಲ್ಲಿ ವಿದ್ಯಾವಂತರಿಗೆ—ಕಿವುಡನಿಗೆ ಉಸುರಿದ ಗುಟ್ಟುಮಾತಿನಂತೆ ಆಗಿವೆ. ನಮ್ಮ ಬಾಯಿಂದ ಹೊರಟದ್ದೊಂದು, ಅವನ ಕಿವಿಹಿಡಿದದ್ದಿನ್ನೊಂದು. ನೇತ್ರೇಂದ್ರಿಯ ಶ್ರವಣೇಂದ್ರಿಯ ಘ್ರಾಣೇಂದ್ರಿಯಗಳು ಹೇಗೋ ಹಾಗೆಯೇ ಅಧ್ಯಾತ್ಮವನ್ನರಿಯುವ ಪ್ರತ್ಯಗಿಂದ್ರಿಯವೊಂದು ಬೇರೆಯಾಗಿರುತ್ತದೆ. ಆ ಇಂದ್ರಿಯವು ಪಟುವಾಗಿಲ್ಲದವರಿಗೆ ಅಧ್ಯಾತ್ಮ ವಿಚಾರಗಳು

ಕಿವುಡನ ಮುಂದೆ ಬಾಜಿಸಿದ ಕಿನ್ನರಿಯಂತೆ, ಕುರುಡನ ಮುಂದೆ ಕುಣಿದ ನರ್ತನದಂತೆ.

ಆತ್ಮವೆಂಬ ವಸ್ತುವೊಂದುಂಟು—ಜೀವಾತ್ಮ ಉಂಟು, ಪರಮಾತ್ಮ ಉಂಟು—ಎಂದು ನಂಬಿರುವವರು ಆತ್ಮಹಿತದ ತ್ರಾಸಿನಲ್ಲಿ ಉಳಿದೆಲ್ಲ ವಸ್ತುಗಳನ್ನೂ ತೂಗಿಸಿ ನೋಡಿ ತೂಕ ಬೆಲೆ ಗೊತ್ತುಮಾಡುತ್ತಾರೆ. ಒಂದು ವಸ್ತುವಿನಲ್ಲಿರುವ "ಸತ್" ಅಂಶಕ್ಕೆ ತಕ್ಕಂತೆ ಅದಕ್ಕೆ ಸಲ್ಲುವ ಬೆಲೆ. ಹೀಗೆ ಸಂಸ್ಕೃತಿಯ ಲೆಕ್ಕಾಚಾರಕ್ಕೆ ಮೂಲಮಾಪಕವಾದದ್ದು ಪರಮ ಸದ್ವಸ್ತುವಾದ ಆತ್ಮದ—ಪರಬ್ರಹ್ಮದ—ದೇವರ—ಜಗದೀಶನ—ಸ್ಮರಣೆ.

ಯಾವ ಮಾನವಸಂಸ್ಕೃತಿ ಇಂಥಾದ್ದಾಗಿರುತ್ತದೆಯೋ ಅದಕ್ಕೆ ದೈವೀಸಂಪತ್ತು ಎನ್ನುವ ಹೆಸರು ಸಲ್ಲುತ್ತದೆ. ಅದರ ಲಕ್ಷಣಗಳನ್ನು ಭಗವದ್ಗೀತೆಯಲ್ಲಿ ಹೀಗೆ ಹೇಳಿದೆ:—

> ಅಭಯಂ ಸತ್ತ್ವಸಂಶುದ್ಧಿಃ ಜ್ಞಾನಯೋಗವ್ಯವಸ್ಥಿತಿಃ |
> ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ ||
> ಅಹಿಂಸಾ ಸತ್ಯಮಕ್ರೋಧಃ ತ್ಯಾಗಶ್ಶಾಂತಿರಪೈಶುನಂ |
> ದಯಾಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ ||
> ತೇಜಃ ಕ್ಷಮಾ ಧೃತಿಃ ಶೌಚಮ್ ಅದ್ರೋಹೋ ನಾತಿಮಾನಿತಾ |
> ಭವಂತಿ ಸಂಪದಂ ದೈವೀಮ್ ಅಭಿಜಾತಸ್ಯ ಭಾರತ ||
>
> ಅಧ್ಯಾಯ ೧೬—೧-೩.

---

# ಹಿಂದೂ ಸಂಸ್ಕೃತಿ

ಒಟ್ಟಿನಲ್ಲಿ ಆತ್ಮಪಾರಮ್ಯ, ಮತ್ತು ಆತ್ಮಸದ್ಗತಿಗೆ ಬಾಧಕವಾಗದೆ ಸಾಧಕವಾಗಬಲ್ಲಂಥ ಲೋಕವ್ಯವಹಾರ, ಅಥವಾ ಧರ್ಮ—ಈ ಎರಡು ತತ್ತ್ವಗಳು ಹಿಂದೂಸಂಸ್ಕೃತಿಯ ಅಂತಸ್ಸಾರವೆಂದು ಹೇಳಬಹುದು. ಲೋಕದ ಸಮಸ್ತ ವಸ್ತುಗಳಿಗೂ

ಸಮಸ್ತ ಸಂಬಂಧಗಳಿಗೂ ನಾವು ಬೆಲೆ ಕಟ್ಟುವುದರಲ್ಲಿ ಅಂತ ರಾತ್ಮದೃಷ್ಟಿಯಿಂದ ವಿಚಾರ ನಡಸಿ, ನಮ್ಮ ಧ್ಯೇಯಗಳನ್ನೂ ಲಕ್ಷ್ಯಗಳನ್ನೂ ತಾರತಮ್ಯಕ್ರಮದಲ್ಲಿ ನಿಯೋಜಿಸಿಟ್ಟು ಕೊಂಡು, ಮೇಲಾದ ಧ್ಯೇಯಕ್ಕೆ ಕೀಳಾದದ್ದರಿಂದ ಭಂಗ ವುಂಟಾಗದಂತೆ ನಾನಾ ಪುರುಷಾರ್ಥಗಳನ್ನು ಸಮನ್ವಯ ಮಾಡಿಕೊಂಡು ಬಾಳುವುದು ಧರ್ಮ. ಅದೇ ವೇದವೇದಾಂತ ಮತದ ಒಳತಿರುಳು. ಆತ್ಮವಸ್ತು ನಾಶವಿಲ್ಲದ್ದು,—ಶಾಶ್ವತ ವಾದದ್ದು. ಅದರ ಜೀವಾವಸ್ಥೆಯಲ್ಲಿ ಅದು ಸ್ವಕರ್ಮಫಲವನ್ನನು ಭವಿಸತಕ್ಕದ್ದು. ಈ ಜೀವದಶೆಯೂ ಅದರ ಕರ್ಮಚರಿತ್ರೆಯೂ ಅನಾದಿಯಾದವು. ಹಾಗೆಯೇ ಜಗತ್ತು ಅನಾದಿಯಾದದ್ದು. ಪುಣ್ಯ ಪಾಪಾನುಸಾರವಾಗಿ ಜೀವದ ಸ್ಥಿತಿಗತಿಗಳು,—ಅದಕ್ಕೆ ಜನ್ಮಾಂತರ ಲೋಕಾಂತರ ಪ್ರಾಪ್ತಿಗಳು ಆಗುತ್ತವೆ. ಅದರ ಋಣಾನುಬಂಧದಂತೆ ಅದಕ್ಕೆ ಜಗತ್ಸಂಬಂಧ. ಪೂರ್ವಕರ್ಮದ ಬಂಧನ ಹೀಗಿದ್ದರೂ, ಜೀವಿಯ ದೇಹದಲ್ಲಿ ಹಳೆಯ ಗಾಳಿಯ ಜೊತೆಗೆ ಹೊಸಗಾಳಿ ಕ್ಷಣಕ್ಷಣವೂ ಬೆರೆಯುತ್ತಿರುವಂತೆ, ಮನುಷ್ಯನು ಆ ಪುರಾತನ ಬಂಧನದಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುವಷ್ಟು ಸ್ವತಂತ್ರ ನೂತನ ಚೈತನ್ಯ ಅವನಲ್ಲಿ ಯಾವಾಗಲೂ ಅಡಗಿರುತ್ತದೆ. ಭಕ್ತಿ ಪರೋಪಕಾರ ಧ್ಯಾನ ತಪಸ್ಸುಗಳಿಂದ ಅವನು ಭಗವದನುಗ್ರಹವನ್ನು ಪಡೆಯಬಹುದು. ಜೀವನು ತನ್ನ ಕಾಮಲೋಭಾದಿಗಳನ್ನು ಮಿತಮಾಡಿ, ಧರ್ಮಾಚರಣೆಯ ಮೂಲಕ ನಿಷ್ಕಾಮ ನಿರಹಂಕಾರಗಳನ್ನು ಅಭ್ಯಾಸಮಾಡಿದಂತೆ,—ಅವನು ಆತ್ಮಸಂಯಮ ಆತ್ಮಾನಾತ್ಮ ವಿವೇಕಗಳನ್ನು ಸಂಪಾದಿಸಿಕೊಂಡಂತೆ,—ಆ ಜೀವವು ಜಗತ್ತಿನ ದ್ವಂದ್ವಪಂಜರದಿಂದ ಮೇಲಕ್ಕೇಳಲಾಗುತ್ತದೆ. ಆಗ ಅದಕ್ಕೆ ಶುದ್ಧಾತ್ಮಜ್ಞಾನ,—ಆತ್ಮಪರಿಪೂರ್ಣತಾ ದರ್ಶನ. ಆಮೇಲೆ

ಕ್ರಮೇಣ ಭಗವತ್ಸಾಕ್ಷಾತ್ಕಾರ,—ಬ್ರಹ್ಮಾನುಭವ. ಅದೇ ಮೋಕ್ಷ ಅಥವಾ ಪ್ರಪಂಚಪಾಶಗಳಿಂದ ಬಿಡುಗಡೆ. ಈ ತತ್ತ್ವಸರಣಿಯ ಆಧಾರದ ಮೇಲೆ ನಮ್ಮ ಜನ ಸಾವಿರಾರು ವರ್ಷಗಳಿಂದ ಕಟ್ಟಿಕೊಂಡು ಬಂದಿರುವ ಜೀವನ ವಿಧಾನವೇ ಭಾರತೀಯ ಸಂಸ್ಕೃತಿ.

ಸಂಸ್ಕೃತಿ ಎಂಬ ಮಾತು ನಮಗೆ ಹೊಸದಿರಬಹುದು. ಅದರ ಅರ್ಥ ಹೊಸತಲ್ಲ. ಯಾವ ಒಂದು ಲೋಕವರ್ತನೆಯ ಸೌಂದರ್ಯ ವನ್ನು ಸಾತ್ತ್ವಿಕತೆ, ಸಭ್ಯತೆ, ಸೌಜನ್ಯ, ವಿನಯ, ಮರ್ಯಾದೆ, ದೊಡ್ಡತನ ಎಂದು ಕರೆಯುವುದು ನಮ್ಮಲ್ಲಿ ಹಿಂದಿನಿಂದ ವಾಡಿಕೆ ಯಾಗಿ ಬಂದಿದೆಯೋ ಅದೇ ಸಂಸ್ಕೃತಿಯ ಜೀವಾಳ. ಉಪ್ಪು, ಹುಳಿ, ಕಾರ, ಬೆಲ್ಲ—ಇವು ಬೇರೆಬೇರೆಯಿರುವಾಗ ಪರಸ್ಪರ ವಿರೋಧಿಗಳಂತೆ ಕಾಣುತ್ತವೆ. ಅವು ಒಂದಾನೊಂದು ಪ್ರಮಾಣ ದಲ್ಲಿ ಸಾರಿನಲ್ಲಿ ಹದವಾಗಿ ಬೆರೆತಾಗ ಆ ಕಲಬೆರಕೆ ಈ ನಾಲ್ಕ ಕ್ಕಿಂತ ಬೇರೆಯಾದ ಮತ್ತು ಇಷ್ಟವಾದ ರುಚಿ ವಿಶೇಷವಾಗು ತ್ತದೆ. ಶ್ರೀಗಂಧ, ಪುನುಗು, ಪಚ್ಚಕರ್ಪೂರ, ಕೇಸರಿ—ಇವು ಪರಸ್ಪರ ವಿರೋಧಿಗಳಲ್ಲದಿದ್ದರೂ ಪ್ರತ್ಯೇಕಿಗಳಂತೆ ಕಾಣಿಸು ತ್ತವೆ. ಆದರೆ, ಒಂದು ಸಮಪ್ರಮಾಣದಲ್ಲಿ ಬೆರೆತಾಗ ಅವುಗಳಲ್ಲಿ ಐದನೆಯದೆನ್ನುವಂತೆ ತೋರುವ ಒಂದು ಪರಿಮಳವಿಶೇಷ ಉದ್ಭವಿ ಸುತ್ತದೆ. ಹಾಗೆಯೇ ವಿದ್ಯೆ, ವಿನಯ, ಚಮತ್ಕಾರ, ಧೈರ್ಯ, ಕಾರುಣ್ಯ, ಹಾಸ್ಯ, ಶೌರ್ಯ, ಸಾಹಸ, ಗಾಂಭೀರ್ಯ—ಈ ನಾನಾ ಗುಣಗಳು ಸೇರಿದ್ದ ಕಡೆ ಅವುಗಳೆಲ್ಲದರ ಸಮ್ಮೇಳನದ ಫಲಿತಾಂಶ ವಾಗಿ ಹತ್ತನೆಯದೊಂದು ಶೀಲ ಸೌಂದರ್ಯ ತೋರುತ್ತದೆ. ಅದರಲ್ಲಿ ಪ್ರಸನ್ನತೆ ಇರುತ್ತದೆ, ತೇಜಸ್ಸೂ ಇರುತ್ತದೆ. ವಿನಯ ವಿರುತ್ತದೆ, ದೃಢತೆಯೂ ಇರುತ್ತದೆ. ಅದಿರುವೆಡೆ ಯಾರಿಗೂ ಅತಿ ಭಯಕ್ಕೂ ಕಾರಣವಿರದು, ಅತಿ ಸ್ವಾತಂತ್ರ್ಯಕ್ಕೂ ಅವಕಾಶ

ವಿಡು. ಅದು ವಿಶ್ವಾಸವನ್ನು ಹುಟ್ಟಿಸುತ್ತದೆ, ಆದರೆ ಗೌರವ ವನ್ನು ಅಳಿಸುವುದಿಲ್ಲ. ಒಟ್ಟಿನ ಮೇಲೆ ಅದು ಸ್ನೇಹ ಸಮಾಧಾನ ಗಳ ವಾತಾವರಣವನ್ನು ಕಲ್ಪಿಸುತ್ತದೆ. ಇಂಥಾದ್ದು ಸಂಸ್ಕೃತಿಯ ಉಪಕಾರ. ಅದು ಮನೋಬುದ್ಧಿ ಪರಿಪಾಕದ ಫಲವಾಗಿ ಆತ್ಮವು ತನ್ನೊಳಗಿನಿಂದ ಸರ್ವದಾ ಹೊರಸೂಸುತ್ತಿರುವ ಒಂದು ದಿವ್ಯಕಾಂತಿ ಮಾಧುರ್ಯ.

ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ನಮ್ಮ ಶ್ರುತಿ ಸ್ಮೃತಿಗಳೆಲ್ಲ ಸತ್ಯವೇ ಪರಮಧರ್ಮವೆಂದು ಹೇಳುತ್ತವಲ್ಲವೆ? ಸತ್ಯವೆಂದರೆ ಯಥಾರ್ಥತೆ. ನಮ್ಮ ಅಂತರಂಗಕ್ಕೆ ಯಾವುದು ತೋರಿಬಂದಿರುತ್ತದೆಯೋ ಅದನ್ನೇ ನುಡಿದು ನಡೆಯುವುದು ಸತ್ಯ. ಹೀಗೆ ಹೇಳಿದರೆ ಸತ್ಯಧರ್ಮ ಬಹು ಸರಳವಾದದ್ದೆಂದು ತೋರುತ್ತದೆ. ಆದರೆ, ಅದು ಅಷ್ಟು ಸರಳವೂ ಸುಲಭವೂ ಅಲ್ಲ. ಮಹಾನುಭಾವರಾದ ಮನುಗಳು ಸತ್ಯವರ್ತನೆಯ ಕ್ರಮವನ್ನು ಹೀಗೆ ವಿಧಿಸಿದ್ದಾರೆ:—

ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ |
ನ ಬ್ರೂಯಾತ್ ಸತ್ಯಮಪ್ರಿಯಂ ||
ಪ್ರಿಯಂ ಚ ನಾನೃತಂ ಬ್ರೂಯಾತ್ |
ಏಷ ಧರ್ಮಃ ಸನಾತನಃ ||

"ಸತ್ಯವಾದದ್ದನ್ನು ಹೇಳತಕ್ಕದ್ದು; ಪ್ರಿಯವಾದದ್ದನ್ನು ಹೇಳತಕ್ಕದ್ದು ; ಪ್ರಿಯವಲ್ಲದ ಸತ್ಯವನ್ನು ಹೇಳತಕ್ಕದ್ದಲ್ಲ; ಸತ್ಯವಲ್ಲದ ಪ್ರಿಯವನ್ನು ಹೇಳತಕ್ಕದ್ದಲ್ಲ."

ಹೀಗೆಂದರೇನಾಯಿತು? ನಮ್ಮ ಮಾತಿನಲ್ಲಿ ಸತ್ಯತೆಯೂ ಪ್ರಿಯತೆಯೂ ಒಡಗೂಡಿರಬೇಕೆಂದು ಹೇಳಿದಂತಾಯಿತು. ಸತ್ಯವೂ ಪ್ರಿಯವೂ ಒಂದೇ ಅಲ್ಲ. ಎಷ್ಟೋ ಸಂದರ್ಭಗಳಲ್ಲಿ ಅವು ಬೇರೆಬೇರೆಯಾಗಿರುವುದು ಮಾತ್ರವಲ್ಲದೆ ಪರಸ್ಪರ ವಿರುದ್ಧ

ವಾಗಿರುವುದೂ ಉಂಟು. ಇಂಥ ಸಂದರ್ಭದಲ್ಲಿ ಸತ್ಯವನ್ನು ನುಡಿಯುವಾಗ ಅದರ ಅಪ್ರಿಯತೆಯನ್ನು ತೆಗೆದುಹಾಕುವುದೂ ಪ್ರಿಯವನ್ನು ಹೇಳುವಾಗ ಅದರಿಂದ ಅಸತ್ಯಾಂಶವನ್ನು ಕಳೆದು ಹಾಕುವುದೂ ವಿಹಿತವಾದ ಧರ್ಮ, ಎಂದಮೇಲೆ, ಸತ್ಯವಾದ ಸಂಗತಿಗೆ ವಾಕ್ಯರೂಪವಾದ ಶರೀರವನ್ನು ಒದಗಿಸಿಕೊಡುವುದ ರಲ್ಲಿ ಒಂದು ವಿವೇಚನೆಯೂ ಒಂದು ಉಪಾಯವೂ ಅವಶ್ಯ ವಾಗುತ್ತದೆ.

---

# ಸತ್ಯನಿರೂಪಣೆಯಲ್ಲಿ ನಯವಿಶೇಷ

## ಭರತನ ಅನುಭವ

ಇದಕ್ಕೆ ಒಂದು ನಿದರ್ಶನವನ್ನು ಭಾಸ ಕವಿ 'ಪ್ರತಿಮಾ' ನಾಟಕದಲ್ಲಿ ಒದಗಿಸಿಕೊಟ್ಟಿದ್ದಾನೆ. ಅಲ್ಲಿಯ ಸಂದರ್ಭವು ಭರತನಿಗೆ ಪಿತೃವಿಯೋಗವಾರ್ತೆಯನ್ನು ತಿಳಿಸುವ ಪ್ರಕರಣದ್ದು. ಶ್ರೀ ರಾಮಚಂದ್ರನು ವನವಾಸಕ್ಕೆ ಹೊರಟ ಬಳಿಕ ದಶರಥನು ಅಯೋಧ್ಯೆಯಲ್ಲಿ ಕಾಲಗತಿಯನ್ನೈದಿದಾಗ ಭರತನು ತನ್ನ ಸೋದರಮಾವನ ರಾಜಧಾನಿಯಾದ ರಾಜಗೃಹದಲ್ಲಿದ್ದನಷ್ಟೆ? ಆತನನ್ನು ಕರೆತರಲು ವಸಿಷ್ಠರು ಸೂತನನ್ನು ಕಳುಹಿಸಿರುತ್ತಾರೆ. ಆ ಸೂತನನ್ನು ಕಂಡೊಡನೆ ಭರತನು ತಂದೆಯ ಆರೋಗ್ಯವನ್ನು ಕುರಿತು ಕೇಳುತ್ತಾನೆ. ಸೂತನು ದಶರಥನು ಮೃತನಾದನೆಂದು ಹೇಳದೆ, ಹೃದಯ ಪರಿತಾಪ ಹೊಂದಿ ಭೂಮಿಯಲ್ಲಿ ಬಿದ್ದನೆಂದು ಮಾತ್ರ ಹೇಳುತ್ತಾನೆ. ಅಲ್ಲಿಂದ ಅವರು ಹೊರಟು ಅಯೋಧ್ಯಾ ಪಟ್ಟಣದ ಬಳಿಗೆ ಬರುತ್ತಾರೆ. ಆಗಲೂ ಸೂತನು ದಿಟವನ್ನು ಪೂರ್ತಿಯಾಗಿ ನುಡಿಯಲಿಲ್ಲ. ಹೀಗೆ ಅವನು ಯೋಚಿಸು ತ್ತಾನೆ :—

ಜನಕಂ ಮೃತಿವಡೆದುದು ಮೇ
ದಿನಿಯೈಶ್ವರ್ಯಕ್ಕೆ ಮಾತೆಯಾಶಿಸಿದುದು ಮೇಣ್ ||
ಬನಕೆ ಪಿರಿಯಣ್ಣನೆಯ್ದಿದು
ದೆನಿಪೀ ಮೂದೋಷಮಂ ನಿವೇದಿಪನಾವೊಂ ||

(ಪಂಡಿತ ಸೀತಾರಾಮಶಾಸ್ತ್ರಿಗಳವರ ಅನುವಾದದಿಂದ)

ಆ ಹೊತ್ತಿಗೆ ಸರಿಯಾಗಿ ಒಬ್ಬ ಭಟನು ಬಂದು, ಆಗ ಕೃತ್ತಿಕಾ ನಕ್ಷತ್ರವೆಂದೂ ಇನ್ನೊಂದು ಗಳಿಗೆ ಕಳೆದು ರೋಹಿಣಿ ಹುಟ್ಟಿದ ಮೇಲೆ ಭರತನು ಪಟ್ಟಣವನ್ನು ಪ್ರವೇಶಿಸತಕ್ಕದ್ದೆಂದೂ ಗುರುಗಳು ಹೇಳಿಕಳುಹಿಸಿದ್ದ ಸಂದೇಶವನ್ನು ತಿಳುಹಿಸುತ್ತಾನೆ. ಭರತನು ಅದರಂತೆ ಅಲ್ಲಿಯ ಉಪವನದಲ್ಲಿ ವಿಶ್ರಮಿಸಿಕೊಳ್ಳ ಲುದ್ದೇಶಿಸಿ ಸ್ಥಳವನ್ನು ಹುಡುಕುತ್ತಿರಲು ಅಲ್ಲಿ ಒಂದು ದೇವಾ ಲಯ ಕಣ್ಣಿಗೆ ಕಾಣಿಸುತ್ತದೆ. ಭರತನು ಅದರೊಳಕ್ಕೆ ಹೋಗಿ, ಗಂಧಪುಷ್ಪಗಳಿಂದ ಅಲಂಕೃತವಾಗಿರುವ ಪ್ರತಿಮೆಗಳ ಸಾಲನ್ನು ನೋಡುತ್ತಾನೆ. ನೋಡಿ ಅವುಗಳಿಗೆ ವಂದಿಸಬೇಕೆಂದು ಇರು ವಷ್ಟರಲ್ಲಿ ಅರ್ಚಕನು ಪ್ರವೇಶಿಸಿ ವಂದನೆ ಬೇಡವೆನ್ನುತ್ತಾನೆ. ಕಾರಣವೇನೆಂದು ಭರತನು ಕೇಳಲು ಅರ್ಚಕನು "ಈ ಪ್ರತಿಮೆ ಗಳು ಕ್ಷತ್ರಿಯರವು. ದೇವತಾಶಂಕೆಯಿಂದ ಬ್ರಾಹ್ಮಣನು ಅವುಗಳಿಗೆ ವಂದಿಸತಕ್ಕದ್ದಲ್ಲ" ಎನ್ನುತ್ತಾನೆ.

ಭರತನು—"ಹಾಗಾದರೆ ಇವರು ಕ್ಷತ್ರಿಯರೋ, ಅವರ ಹೆಸರೇನು" ಎಂದು ಕೇಳುತ್ತಾನೆ.

ಅರ್ಚಕ—"ಅವರು ಇಕ್ಷ್ವಾಕುಗಳು."

ಭರತ—"ಇಕ್ಷ್ವಾಕುಗಳೆ? ಹಾಗಾದರೆ ಇವರು ಅಯೋ ಧ್ಯೆಯ ಒಡೆಯರು. ನನ್ನ ಸುಯೋಗದಿಂದ ಈ ಮಹಾನು ಭಾವರ ಸಂದರ್ಶನ ನನಗೆ ಈಗ ದೊರೆತಿದೆ. ಈತನು ಯಾರು?"

ಅರ್ಚಕ—"ಈತನು ಧರ್ಮದಿಂದ ಜಗತ್ತನ್ನು ಬೆಳಗಿದ ದಿಲೀಪನು."

ಭರತ—"ಆ ಧರ್ಮಪರಾಯಣನಿಗೆ ನಮಸ್ಕಾರ. ಈತನು ಯಾರು ?"

ಅರ್ಚಕ—"ಅನೇಕ ಸಹಸ್ರ ಬ್ರಾಹ್ಮಣರ ಆಶೀರ್ವಚನಕ್ಕೆ ಪಾತ್ರನಾದ ರಘುಮಹಾರಾಯನು."

ಭರತ—"ಆಹಾ! ಮೃತ್ಯು ಪ್ರಬಲವಾದದ್ದು. ಬ್ರಾಹ್ಮಣ ವಚನವನ್ನೂ ಅದು ಮೀರಿತಲ್ಲಾ ! ರಘುವಿಗೆ ನಮಸ್ಕಾರ. ಈತನಾರು ?"

ಅರ್ಚಕ—"ಈತನು ಬಹುಯಜ್ಞಗಳನ್ನು ಮಾಡಿ ನಿರ್ಮಲನಾದ ಅಜಮಹಾರಾಯನು; ಪ್ರಿಯೆಯ ವಿಯೋಗದಿಂದ ರಾಜ್ಯಪದವಿಯನ್ನು ತ್ಯಜಿಸಿದವನು."

ಭರತ—"ಶ್ಲಾಘ್ಯವಾದ ಪಶ್ಚಾತ್ತಾಪವುಳ್ಳ ಈತನಿಗೆ ನಮಸ್ಕಾರ."

ಹೀಗೆ ಭರತನು ಹೇಳುತ್ತಿರುವಾಗ ಅವನ ದೃಷ್ಟಿ ನಾಲ್ಕನೆಯದಾದ ದಶರಥಪ್ರತಿಮೆಯ ಮೇಲೆ ಬೀಳುತ್ತದೆ. ಮನಸ್ಸು ವ್ಯಾಕುಲಗೊಳ್ಳುತ್ತದೆ. ಆಗ ಅವನು ಪೂಜಾರಿಯನ್ನು ಕುರಿತು ಹಿಂದಿನ ಮೂರ್ತಿಗಳ ಹೆಸರುಗಳನ್ನು ತಾನು ಜಾಗರೂಕತೆಯಿಂದ ಕೇಳಿರಲಿಲ್ಲವಾಗಿ ಅವನ್ನು ಪುನಃ ಹೇಳಬೇಕೆಂದು ಕೇಳುತ್ತಾನೆ. ಅವನು "ಈತ ದಿಲೀಪ, ಈತ ರಘು, ಈತ ಅಜ" ಎಂದು ಹೆಸರುಗಳನ್ನು ಇನ್ನೊಮ್ಮೆ ಹೇಳುತ್ತಾನೆ. ಭರತನು ಅವುಗಳಿಗೆ ಬೇರೆಬೇರೆಯಾಗಿ ನಮಸ್ಕರಿಸಿ, ಮತ್ತೊಮ್ಮೆ ಆ ಹೆಸರುಗಳನ್ನು ಕೇಳುತ್ತಾನೆ. ಮತ್ತೊಮ್ಮೆ ಅರ್ಚಕನು ಹೆಸರುಗಳನ್ನು ಹೇಳುತ್ತಾನೆ. ಕಡೆಯಸಾರಿ ಅಜನ ಹೆಸರನ್ನು ಹೇಳಿದಾಗ ಭರತನು, "ಈತ ಮಹಾರಾಜ ದಶರಥನ ತಂದೆ

ಯಲ್ಲವೆ?" ಎಂದು ತನ್ನ ತಂದೆಯ ಸಂಬಂಧವನ್ನು ಜ್ಞಾಪಕಕ್ಕೆ ತಂದುಕೊಳ್ಳುತ್ತಾನೆ. ಬಳಿಕ ಅರ್ಚಕನನ್ನು ಕುರಿತು,—"ಜೀವಿಸಿರುವವರ ಪ್ರತಿಮೆಗಳನ್ನು ಇಲ್ಲಿ ಇಡುವುದುಂಟೆ?" ಎಂದು ಕೇಳುತ್ತಾನೆ. ಅರ್ಚಕನು—"ಇಲ್ಲ, ದಿವಂಗತರಾದವರ ಪ್ರತಿಮೆಗಳನ್ನೇ" ಎಂದು ಹೇಳಿ ಹೀಗೆ ವಿವರಿಸುತ್ತಾನೆ—

ಹರಣಂಗಳುಮಂ ರಾಜ್ಯದ |
ಸಿರಿಯುಮನಂಗನೆಯ ಶುಲ್ಕಕಾವಂ ತೊರೆದಂ ||
ದೊರೆವಡೆದಾ ದಶರಥ ನೃಪ |
ವರನೀ ಪ್ರತಿಮೆಯಿರಲಿತ್ತ ಬೆಸಗೊಳ್ಳೆಯದೇಂ ||

(ಪಂಡಿತ ಸೀತಾರಾಮಶಾಸ್ತ್ರಿಗಳವರ ಅನುವಾದದಿಂದ)

ಭರತನು ಇದನ್ನು ಕೇಳಿ ಮೂರ್ಛಿತನಾಗುತ್ತಾನೆ. ಆ ಮೇಲೆ ಏಳುತ್ತಾನೆ. ಮುಂದಿನ ಕಥೆ ನಡೆಯುತ್ತದೆ.

ಭರತನಿಗೆ ತನ್ನ ವಂಶಪೂರ್ವಿಕರ ಪ್ರತೀಕಗಳ ಮೂಲಕ ಅರ್ಚಕನ ಮುಖೇನ ಅವರ ಕಥೆಯು ಜ್ಞಾಪಕಕ್ಕೆ ಬಂದೊಡನೆಯೆ ಅವನ ಮನಸ್ಸಿನಲ್ಲಡಗಿದ್ದ ಪಿತೃಪಿತಾಮಹ ಭಕ್ತಿ ಉದ್ಬುದ್ಧವಾಗುತ್ತದೆ. ಅವನು ಆದಿಯಿಂದ ಅನುಕ್ರಮವಾಗಿ ಒಬ್ಬೊಬ್ಬ ಪೂರ್ವಜನ ಪ್ರತಿಮೆಯ ಸನ್ನಿಧಿಯಲ್ಲೂ ನಿಂತು, ಆತನ ಮಹಿಮೆಯನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತ ಭಕ್ತಿಯನ್ನು ಸಲ್ಲಿಸುತ್ತಾನೆ. ಹಾಗೆಯೇ ಕ್ರಮಕ್ರಮವಾಗಿ ನಡೆದು, ಕಡೆಗೆ ದಶರಥನ ಬಳಿಗೆ ಬರುವ ವೇಳೆಗೆ ಅವನ ಮನಸ್ಸು ಒಂದು ವಿರಕ್ತೋದಾತ್ತ ಸ್ಥಿತಿಗೆ ಬಂದಿರುತ್ತದೆ. ಮಹನೀಯ ಧ್ಯಾನದಿಂದ ಅವನ ಜೀವ ಒಂದು ಪರಮೋನ್ನತವಾದ ದೃಶ್ಯವನ್ನು ನೋಡಿ ರೋಮಾಂಚ ಹೊಂದಿರುತ್ತದೆ. ತಾತ್ಕಾಲಿಕವಾದ ಸಣ್ಣ ಸಂಕುಚಿತದ ಭಾವನೆಗಳೆಲ್ಲ ಅಡಗಿಹೋಗಿ ಚಿರಸ್ಥಾಯಿಯಾದ ಮಹತ್ವದ ಚಿತ್ರವೊಂದೇ ಅವನ ಕಣ್ಣೆದುರಿಗೆ ನಿಂತಿರು

ತ್ತದೆ. ಅದರ ಜೊತೆಗೆ ಮತ್ತೊಂದು ಗಂಭೀರಸ್ಮರಣೆಯೂ ಸೇರಿಕೊಂಡಿರುತ್ತದೆ. ಆಜನ್ಮಶುದ್ಧನಾದ ರಘುವಿಗೆ ಕೂಡ, ಉತ್ತಮಶ್ಲೋಕನಾದ ದಿಲೀಪನಿಗೆ ಕೂಡ, ಅದ್ಭುತಚರಿತ್ರನಾದ ಅಜನಿಗೆ ಕೂಡ ಮೃತ್ಯು ತಪ್ಪಿದ್ದಲ್ಲ. ಇಹವೈಭವ ಎಂಥವನಿಗಾದರೂ ಒಂದಾನೊಂದು ದಿನ ಕಡೆಗಾಣತಕ್ಕದ್ದೇ. ಈ ಕಾಲಧರ್ಮಸ್ಮರಣೆಯೂ ಭರತನ ಮನಸ್ಸಿನಲ್ಲಿ ತುಂಬಿರುತ್ತದೆ. ಹೀಗೆ ಮನಸ್ಸು ಮಹತ್ವಸಂಸ್ಪರ್ಶದಿಂದಲೂ ಕಾಲಮಹಿಮಾಸಂಸ್ಮರಣೆಯಿಂದಲೂ ಉನ್ನತವೂ ಗಂಭೀರವೂ ಆಗಿರುವಾಗ ತಾಕುತ್ತದೆ ಅದಕ್ಕೆ ದಶರಥನಿರ್ಯಾಣದ ವಾರ್ತೆ. ಅಂಥ ವಿಪದ್ವಾರ್ತೆಗೆ ಭರತನ ಮನಸ್ಸನ್ನು ತಕ್ಕಷ್ಟು ಸಿದ್ಧಪಡಿಸಿರುವುದು ವಸಿಷ್ಠರ "ಸಂಸ್ಕೃತಿ.' ಆ ಸಿದ್ಧತೆಯಿಂದ ದುಃಖ ತಪ್ಪಿಹೋಯಿತೆಂದಲ್ಲ; ಅದರ ಹೊಡೆತದ ವೇಗ ಕೊಂಚಮಾತ್ರವಾದರೂ ಕಡಮೆಯಾಗಿರಬೇಕು. ಆ ಪ್ರತಿಮಾ ಮೂಲಕವಾದ ಅಥವಾ ಬೇರೆ ವಿಧದ ಪೂರ್ವಸಿದ್ಧತೆಯೊಂದೂ ಇಲ್ಲದೆ ಭರತನ ಕಿವಿಗೆ ಥಟಕ್ಕನೆ—"ಅಯ್ಯಾ, ನಿಮ್ಮಪ್ಪ ದಶರಥ ಸತ್ತುಹೋದ" ಎಂದು ಕೇಳಬಂದಿತ್ತೆಂದು ಭಾವಿಸೋಣ. ಆಗ ಆ ಒರಟು ನುಡಿಯಿಂದ ಆವನ ಮನಸ್ಸಿಗೆ ತಾಕುತ್ತಿದ್ದ ಪೆಟ್ಟಿನ ವೇಗ ಎಷ್ಟಿರಬಹುದು! ನಮ್ಮ ಸಾಮಾನ್ಯಸ್ವಭಾವದಿಂದ ಭರತನ ಮನಃಸ್ಥಿತಿಯನ್ನು ನಾವು ಊಹಿಸಬಹುದಾದರೆ, ಅಂಥಾ ಹಠಾತ್ತಾದ ಒರಟು ನುಡಿಯ ಅಸಹನೀಯತೆಯನ್ನು ವಸಿಷ್ಠರು ಅಳವಡಿಸಿದ ಉಪಾಯವು ತಕ್ಕಮಟ್ಟಿಗೆ ನೀಗಿತ್ತೆಂದು ಧಾರಾಳವಾಗಿ ಹೇಳಬಹುದು. ಒಂದು ವಿಷಮಸನ್ನಿವೇಶದ ಕಾಠಿನ್ಯವನ್ನು, ಒಂದು ವಿಯೋಗವಾರ್ತೆಯ ದುಃಖವನ್ನು, ಒಂದು ಉದ್ವೇಗಪ್ರಸಂಗದ ತೀವ್ರತೆಯನ್ನು ಮನುಷ್ಯನ ವಾಗ್ವರ್ತನೆಗಳು ಎಷ್ಟು ಮಟ್ಟಿಗೆ ನೀಗಿಸಲಾದೀತೋ ಅಷ್ಟು ಮಟ್ಟಿಗೆ ಅವು

ನೀಗುವಂತೆ ಮಾಡುವುದು ಸಂಸ್ಕೃತಿ. ಒರಟು ಸಂದರ್ಭದ ಒರಟುತನವನ್ನು, ಖಾರದ ವಸ್ತುವಿನ ಖಾರವನ್ನು, ಕಳೆಯು ವುದು ಸಂಸ್ಕೃತಿ.

ವಸಿಷ್ಠರು ಸತ್ಯವನ್ನು ಅದು ಅಪ್ರಿಯವೆಂದು ಮುಚ್ಚಿರಿಸಲಿಲ್ಲ. ಆದರೆ, ಅದರ ಅಪ್ರಿಯತೆಯನ್ನು ಘೋರರೂಪದಲ್ಲಿ ತೋರಿಸ ಲಿಲ್ಲ. ಇದು ಮೇಲೆ ಉದಾಹರಿಸಿದ ಮನುವಾಕ್ಯದ ತಾತ್ಪರ್ಯ.

## ಮ್ಯಾಕ್‌ಬೆತ್ತನ ಉದಾಹರಣೆ

ಇನ್ನೊಂದು ನಿದರ್ಶನವನ್ನು ನೋಡೋಣ. ಇದು ಷೇಕ್ಸ್ ಪಿಯರ್ ಕವಿಯದು. ಮ್ಯಾಕ್ಬೆತ್ ನಾಟಕದಲ್ಲಿ ಮ್ಯಾಕ್‌ಬೆತ್ತನ ರಾಣಿಗೆ ಬುದ್ಧಿ ಭ್ರಮಣೆಯಾಗಿರುತ್ತದೆ. ಮ್ಯಾಕ್ಬೆತ್ತನು ವೈದ್ಯ ನನ್ನು ಕರೆದು ಆಕೆಗೆ ಚಿಕಿತ್ಸೆ ನಡಸಬೇಕೆಂದು ಹೇಳುತ್ತಾನೆ. ಆದರೆ ತನ್ನ ಮನಸ್ಸಿಗೇ ಭೀಕರವಾದ ಈ ವಾರ್ತೆಯನ್ನು ಆತ ಎಂಥ ಮಾತಿನಲ್ಲಿ ವೈದ್ಯನಿಗೆ ತಿಳಿಸುತ್ತಾನೆಂಬುದನ್ನು ನಾವು ನೋಡಬೇಕು. ಹೆಂಡತಿಗೆ ಹುಚ್ಚು ಹಿಡಿಯಿತೆಂದು ಹೇಳುತ್ತಾ ನೆಯೆ? ಇಲ್ಲ. ಉನ್ಮತ್ತಳಾದಳೆಂದು ಹೇಳುತ್ತಾನೆಯೆ? ಇಲ್ಲ. 'ಹುಚ್ಚು', 'ಉನ್ಮಾದ' 'ಮನೋವ್ಯಾಧಿ' ಇಂಥವು ಕಠಿನ ವಚನಗಳು. ಅವುಗಳನ್ನು ನುಡಿದರೆ, ನುಡಿಯುವಾಗ ನುಡಿಯು ವವನ ಮನಸ್ಸಿಗೇ ಅಳುಕು ತೋರುತ್ತದೆ. ಪ್ರಿಯಳ ವಿಷಯದಲ್ಲಿ ಅಂಥ ವಚನಗಳನ್ನಾಡಲು ಪ್ರೀತಿವಂತನಿಗೆ ಮನಸ್ಸೊಪ್ಪದು. ಮ್ಯಾಕ್‌ಬೆತ್ತನು ತನ್ನ ಮನದ ಶಂಕೆಯನ್ನು ನುಣುಪಾದ ಮಾತಿನಲ್ಲಿ ತೇಲಿಸಿ ಹೇಳುತ್ತಾನೆ:—

Can'st thou not minister to a mind diseas'd;
Pluck from the memory a rooted sorrow;
Raze out the written troubles of the brain;
And with some sweet oblivious antidote,

Cleanse the stuff'd bosom of that perilous stuff,
Which weighs upon the heart?

ಬೇರಿಟ್ಟ ದುಃಖಮಂ ನೆನಪಿನಿಂ ಕೀಳ್ತ್ತು
ಮಿದುಳಿನೊಳ್ ಬರೆದಿರ್ಪ ಕಷ್ಟಗಳ ತೊಳೆದಳಿಸಿ,
ಹೃದಯವನು ಕುಗ್ಗಿಸಿಹ ಭಯದ ವಿಷಗರ್ಭವನು
ಇನಿದಾದ ಮರೆವನಾಗಿಪ ಮದ್ದಿನಿಂ ತೊಳೆದು
ಅಸ್ವಸ್ಥಮನಕೆ ನೀನುಪಚರಿಸಲಾರೆಯೇಂ?

ಇಲ್ಲಿಯೂ ಸತ್ಯವನ್ನು ಮರೆಮಾಚಿಲ್ಲ. ಅದರ ಅಪ್ರಿಯತೆಯನ್ನು ಮಾತ್ರ ಕೂಡಿದಷ್ಟು ಮರೆಮಾಡಿದೆ.

ಮ್ಯಾಕ್‌ಬೆತ್ತನು ಮೇಲಿನ ಸಂದರ್ಭದಲ್ಲಿ ಅನುಸರಿಸಿದ ವಚನರೀತಿಯನ್ನು ಇಂಗ್ಲಿಷಿನಲ್ಲಿ Tact (ಟ್ಯಾಕ್ಟ್) ಎಂದು ಹೇಳುತ್ತಾರೆ. ಇದನ್ನು ನಾವು 'ನಯಕೌಶಲ' ಎಂದು ಹೇಳಬಹುದು. ಇತರರಿಗೆ ಅಸಮಾಧಾನವುಂಟುಮಾಡದ ರೀತಿಯಲ್ಲಿ, ಆದರೆ ಸತ್ಯವನ್ನೆಷ್ಟುಮಾತ್ರವೂ ಬಿಡದೆ ಮಾತನಾಡುವ, ಅಥವಾ ಹಾಗೆ ನಡವಳಿಕೆ ನಡೆಯುವ, ಒಂದಾನೊಂದು ಆತ್ಮಸಂಯಮಪೂರ್ವಕವಾದ ಚಾತುರ್ಯವೇ ಆ ನಯದ ವಿಶೇಷಗುಣ. ನಯದಲ್ಲಿ ಅಸತ್ಯವೂ ಅನ್ಯಾಯವೂ ಸೇರಿರಬೇಕಾದದ್ದಿಲ್ಲ. ಆದರೆ ಸತ್ಯದೊಡನೆ ಕಟುತೆಯೇನಾದರೂ ಬೆರೆತುಕೊಂಡಿದ್ದರೆ, ಆ ಕಟುತೆಯನ್ನು ಮಾತ್ರ ನಯಕುಶಲತೆಯು ಅಥವಾ "ಟ್ಯಾಕ್ಟ್" ಎಂಬುದು ಕಿತ್ತುಹಾಕುತ್ತದೆ. ಈ ತೆರನಾದ "ಟ್ಯಾಕ್ಟ್" ಅಥವಾ ನಯಾಭಿಜ್ಞತೆಯೇ ಸಾಹಿತ್ಯವ್ಯಾಸಂಗದಿಂದ ನಮಗೆ ದೊರೆಯಬಹುದಾದ ಪರಮ ಲಾಭವೆಂದು ಪ್ರಾಜ್ಞನಾದ ಲಾರ್ಡ್ ಮಾರ್ಲೆ (Lord Morley) ಹೇಳಿದ್ದಾನೆ. ಉತ್ತಮಕಾವ್ಯೇತಿಹಾಸಗಳಲ್ಲಿ ಆಲೋಡನೆ ಮಾಡಿಕೊಳ್ಳುವುದರಿಂದ ನಮಗೆ ದೊರೆಯುವ ಫಲವು ನಯಾಭಿಜ್ಞತೆ; ಮತ್ತು ತದನುಸಾರಿಯಾದ

ಸೌಮ್ಯೋಕ್ತಿನಿಪುಣತೆ—ಕಠೋರವಾದದ್ದನ್ನು ಕೂಡಿದ ಮಟ್ಟಿಗೂ ಕಠೋರತೆಯಿಂದ ಬಿಡಿಸಿ ಹೇಳುವುದು,—ಒರಟಾದದ್ದನ್ನು ನುಣುಪಾಗಿಸುವುದು.

ಹಾಲು ಪರಮೋತ್ತಮವಾದ ಆಹಾರವೆಂದು ಹೇಳುವಾಗ, ನಾವು ಉದ್ದೇಶದಲ್ಲಿ ಇಟ್ಟಿರುವುದು ಹಾಲಿನ ಆಹಾರಯೋಗ್ಯತೆಯನ್ನು. ಹಾಗೆಯೇ ಸತ್ಯವನ್ನು ನಮಗೆ ಅಮೂಲ್ಯವನ್ನಾಗಿ ಮಾಡುವುದು ಅದರ ಧರ್ಮಸಾಧಕತೆ. ಧರ್ಮವೆಂಬುದಕ್ಕೆ ಸತ್ಯ ಅವಶ್ಯ. ಆದಕಾರಣ ಸತ್ಯವು ನಮಗೆ ಕರ್ತವ್ಯ. ಹಾಗಾದರೆ ಧರ್ಮಕ್ಕೆ ಅವಶ್ಯವಲ್ಲದ ಸತ್ಯವೂ ಉಂಟೊ ? ಉಂಟು. ಮಾನವ ಸನ್ನಿವೇಶಗಳನ್ನು ಬಹುವಾಗಿ ವಿಸ್ತಾರಕ್ಷೇತ್ರಗಳಲ್ಲಿ ನೋಡಿರುವವರಿಗೆ,—ವಿಶಾಲವಾದ ಅನುಭವವನ್ನು ಪಡೆದು ಸೂಕ್ಷ್ಮವಾದ ಕಣ್ಣಿಂದ ಕೆಲವು ಬಗೆಯ ಸಂದರ್ಭಗಳನ್ನು ಪರಾಮರ್ಶಿಸಿರುವವರಿಗೇ—ಸತ್ಯವೆಂಬುದು ಧರ್ಮಕ್ಕೆ ಅಪ್ರಸಕ್ತಮಾತ್ರವೇ ಅಲ್ಲ, ವಿರುದ್ಧ ಕೂಡ ಆಗಬಹುದೆಂದು ತೋರಿಬರುವುದುಂಟು. ಶಬ್ದಮಾತ್ರದ ಸತ್ಯವು ಕಾರ್ಯದಲ್ಲಿ ಧರ್ಮಕ್ಕೆ ಹಾನಿಕರವಾಗಬಹುದೆನ್ನಲು ಮಹಾಭಾರತದಲ್ಲಿ ದೃಷ್ಟಾಂತವುಂಟು. ಅದನ್ನು ನೋಡೋಣ.

## ಅರ್ಜುನನ ಪ್ರಮಾದ

ಕುರುಕ್ಷೇತ್ರದಲ್ಲಿ ಮಹಾಯುದ್ಧ ನಡೆಯುತ್ತಿರುತ್ತದೆ. ಅರ್ಜುನನು ಕರ್ಣನನ್ನು ಆಹುತಿಗೊಳ್ಳುವುದಾಗಿ ಧರ್ಮರಾಯನೊಡನೆ ಪ್ರತಿಜ್ಞೆಮಾಡಿ ರಣರಂಗಕ್ಕೆ ಬಂದಿರುತ್ತಾನೆ. ಧರ್ಮರಾಯನು ಅದನ್ನು ನಂಬಿ, ಕುತೂಹಲದಿಂದ ತಾನೂ ಯುದ್ಧಭೂಮಿಯ ಮತ್ತೊಂದು ಭಾಗದಲ್ಲಿ ತನ್ನ ಸೇನೆಯನ್ನು ನಡಸುತ್ತಿರುತ್ತಾನೆ. ಆ ದಿನ ಅತಿ ಘೋರವಾದ ಸಂಕುಲ ಯುದ್ಧ

ನಡೆಯುತ್ತದೆ. ಒಂದೆಡೆ ಶಲ್ಯಪ್ರೇರಿತನಾದ ಕರ್ಣನ ಬಾಣಾಹತಿ ಯುಧಿಷ್ಠಿರನ ಮೇಲೆ ಭಯಂಕರವಾಗಿ ಬೀಳುತ್ತದೆ. ಆತನು ಗಾಯಪಟ್ಟು ನೋವನ್ನು ತಡೆಯಲಾರದೆ ಶಿಬಿರಕ್ಕೆ ಹಿಂತಿರುಗುತ್ತಾನೆ. ಇನ್ನೊಂದು ಕಡೆ ಅರ್ಜುನನು ಶತ್ರುಗಳನ್ನಟ್ಟಿಕೊಂಡು ಬರುತ್ತ ಬರುತ್ತ ಯುಧಿಷ್ಠಿರನನ್ನು ಎಲ್ಲಿಯೂ ಕಾಣದೆ, ಆತನಿಗಾಗಿ ವಿಚಾರಿಸಿ, ನಡೆದಿದ್ದ ಸಂಗತಿಯನ್ನು ಕೇಳಿದ ಬಳಿಕ ವ್ಯಾಕುಲಿತನಾಗಿ, ಬಿಡಾರಕ್ಕೆ ಬಂದು ಯುಧಿಷ್ಠಿರನನ್ನು ಕಾಣುತ್ತಾನೆ. ಯುಧಿಷ್ಠಿರನಿಗಾದರೋ ಕರ್ಣಸಂಹಾರದ ವಾರ್ತೆಯನ್ನು ಕೇಳಬೇಕೆಂಬ ಕುತೂಹಲ ಮನಸ್ಸಿನಲ್ಲಿ ತುಂಬಿರುತ್ತದೆ. ಆ ಆತುರದಲ್ಲಿ ಆತನು ಅರ್ಜುನನು ತನಗೆ ಇಷ್ಟವಾದ ಕರ್ಣವಧೆಯ ವೃತ್ತಾಂತವನ್ನೇ ತಂದಿರಬೇಕೆಂದು ಭ್ರಮಿಸಿರುತ್ತಾನೆ. ಆದರೆ ಅರ್ಜುನನು ತಾನು ಅಶ್ವತ್ಥಾಮನ ಕೈಗೆ ಸಿಕ್ಕಿ ಅಲ್ಲಿ ಶ್ರಮಪಟ್ಟಂತೆಯೂ, ಅಲ್ಲಿಂದ ತಪ್ಪಿಸಿಕೊಂಡು ಬಂದಾಗ ಅಣ್ಣನಿಗಾದ ಅಪಘಾತದ ಸುದ್ದಿಯನ್ನು ಕೇಳಿ ಅಣ್ಣನನ್ನು ವಿಚಾರಿಸಲು ಬಂದಂತೆಯೂ ಹೇಳುತ್ತಾನೆ. ಯುಧಿಷ್ಠಿರನು ಆ ಮಾತನ್ನು ಮೂದಲಿಕೆಯೆಂದು ಶಂಕಿಸಿ, ಮೊದಲೇ ತನ್ನಲ್ಲಿ ಪ್ರಜ್ವಲಿಸುತ್ತಿದ್ದ ಕ್ರೋಧವನ್ನು ಮತ್ತಷ್ಟು ಕೆರಳಿಸಿಕೊಳ್ಳುತ್ತಾನೆ. ಆ ನೋವಿನ ಮತ್ತು ರೋಷದ ಆವೇಗದಲ್ಲಿ ಅರ್ಜುನನನ್ನು ಒಗಬಗೆಯಾಗಿ ಮೂದಲಿಸಿ, 'ನಿನ್ನ ಗಾಂಡೀವವನ್ನು ಬಿಸುಡು, ನಿನ್ನ ಬಾಹುವೀರ್ಯಕ್ಕೆ ಧಿಕ್ಕಾರವಿರಲಿ, ನಿನ್ನ ಧ್ವಜವೂ ನಿನ್ನ ರಥವೂ ಹಾಳಾಗಲಿ' ಎಂದು ಶಪಿಸುತ್ತಾನೆ. ಅರ್ಜುನನ ಮುಖದಿಂದಲೂ ಪ್ರತ್ಯುತ್ತರವು ಸಿಡಿಲಾಗಿ ಗುಡುಗಾಗಿ ಬರುತ್ತದೆ. ಇಬ್ಬರಿಗೂ ನಡುವೆ ಕೃಷ್ಣನು ಮಾತನಾಡದೆ ಕೇವಲ ಸಾಕ್ಷಿಯಾಗಿ ಕುಳಿತಿರುತ್ತಾನೆ. ಅರ್ಜುನನು—"ಕೃದ್ಧಸ್ಸರ್ಪ ಇವ ಶ್ವಸನ್"—ಚಲಗೊಂಡ ಹಾವಿನಂತೆ ಬುಸುಗುಟ್ಟುತ್ತಾ

ಕೃಷ್ಣನ ಕಡೆ ತಿರುಗಿ, "ಗೋವಿಂದ, ನನ್ನ ಪ್ರತಿಜ್ಞೆಯನ್ನು ನೀನು ಬಲ್ಲೆಯಷ್ಟೆ? ಯಾರಾದರೆ ನನ್ನ ಗಾಂಡೀವವನ್ನು ಬಿಸುಡೆಂದು ಹೇಳುತ್ತಾನೆಯೋ ಅಂಥವನ ತಲೆಯನ್ನು ನಾನು ಕಡಿಯಲುಳ್ಳವನು." ಹೀಗೆನ್ನುತ್ತ ಅರ್ಜುನ ತನ್ನ ಖಡ್ಗವನ್ನು ಸೆಳೆಯುತ್ತಾನೆ. ತಾನಾಡಿದ್ದ ಶಪಥವಾಕ್ಯದ ಸತ್ಯದ ಮೇಲೆ ಅವನ ಗಮನವೆಲ್ಲ ನಿಂತಿದೆ ಆಗ. ಅಷ್ಟರ ವರೆಗೂ ಮೌನದಿಂದಿದ್ದ ಪಾರ್ಥಸಾರಥಿ ಆಗ ಬಾಯಿಬಿಟ್ಟು ಧರ್ಮರಹಸ್ಯವನ್ನು ವಿವರಿಸುತ್ತಾನೆ. ಅರ್ಜುನನನ್ನು ಕುರಿತು,—"ಏನಯ್ಯಾ, ಏನುಬಲ್ಲೆ ನೀನು ಸತ್ಯಸ್ವರೂಪವನ್ನ? ನೀನೇನು ವೃದ್ಧರನ್ನು ಸೇವಿಸಿದ್ದೀಯಾ? ಧರ್ಮದ ಸೂಕ್ಷ್ಮವನ್ನು ತಿಳಿದುಕೊಂಡಿದ್ದೀಯಾ? ಸತ್ಯವು ಅಸತ್ಯವಾಗುವ ಸಂದರ್ಭವನ್ನೂ ಅಸತ್ಯವೇ ಸತ್ಯವಾಗುವ ಸಂದರ್ಭವನ್ನೂ ಕಂಡುಕೊಂಡಿದ್ದೀಯಾ?" ಎಂದು ಕೇಳುತ್ತಾನೆ.

ಸತ್ಯಮೇವ ತು ವಕ್ತವ್ಯಂ |
ವಕ್ತವ್ಯಮನೃತಂ ಭವೇತ್ ||
ಯತ್ರಾನೃತಂ ಭವೇತ್ ಸತ್ಯಂ |
ಸತ್ಯಂ ಚಾಪ್ಯನೃತಂ ಭವೇತ್ ||

[ಸತ್ಯವನ್ನು ಹೇಳಬೇಕಾದದ್ದೇನೋ ಸರಿ. ಅನೃತವೂ ಹೇಳಬೇಕಾದದ್ದಾಗುವುದುಂಟು. ಸುಳ್ಳೇ ಸತ್ಯದಂತೆ ಒಳ್ಳೆಯದಾಗುವ ಸಂದರ್ಭವುಂಟು. ಸತ್ಯವೇ ಸುಳ್ಳಿನಂತೆ ಕೇಡಾಗುವ ಸಂದರ್ಭವೂ ಉಂಟು]

ಒಂದಾನೊಂದು ಸಂದರ್ಭದಲ್ಲಿ ವಕ್ತವ್ಯವಾದದ್ದು ಸತ್ಯವೋ ಅನೃತವೋ ಎಂಬ ಪ್ರಶ್ನೆಗೆ ಉತ್ತರ ಹೇಳತಕ್ಕದ್ದು ಧರ್ಮವಿವೇಕ. ಯಾವುದು ಧರ್ಮಸಾಧಕವೋ ಅದು ವಕ್ತವ್ಯ. ಧರ್ಮವೆಂದರೆ ಲೋಕಕ್ಷೇಮ. ಕೃಷ್ಣನು ಹೀಗೆ ಹೇಳುತ್ತಾನೆ:—

ಧಾರಣಾದ್ಧರ್ಮಮಿತ್ಯಾಹುಃ |
ಧರ್ಮೋ ಧಾರಯತಿ ಪ್ರಜಾಃ ||

[ ಯಾವ ಒಂದು ಮಾತು ಅಥವಾ ನಡವಳಿಕೆ ಲೋಕಹಿತಕ್ಕೆ ಸಾಧಕವಾಗಿರುತ್ತದೆಯೋ ಅದೇ ಧರ್ಮ.] ಹಾಗೆಂದ ಮೇಲೆ ಸತ್ಯದ ವಕ್ತವ್ಯತೆಯನ್ನು ಅಥವಾ ಅವಕ್ತವ್ಯತೆಯನ್ನು ಫಲಾಫಲ ಗಣನೆಯಿಂದ ನಿಷ್ಕರ್ಷಿಸಬೇಕಾಗುತ್ತದೆ

ಯದ್ಭೂತಹಿತಮತ್ಯನ್ತಂ
ತತ್ಸತ್ಯಮಿತಿ ಧಾರಣಾ ||

[ಯಾವುದು ಜೀವಗಳ ಅತ್ಯನ್ತ ಹಿತಕ್ಕೆ ಸಾಧಕವಾಗುತ್ತದೆಯೋ ಅದು ಸತ್ಯ.]

ವಿವಾಹಕಾಲೇ ರತಿಸಂಪ್ರಯೋಗೇ |
ಪ್ರಾಣಾತ್ಯಯೇ ಸರ್ವಧನಾಪಹಾರೇ ||
ವಿಪ್ರಸ್ಯಚಾರ್ಥೇಽಹ್ಯನೃತಂ ವದೇತ |
ಪಂಚಾನೃತಾನ್ಯಾಹುರಪಾತಕಾನಿ ||

[ಮನುಷ್ಯ ಸಮಾಜದ ಇರುವಿಕೆಗೆ ಮೂಲಸಂಘಟನೆಯಾದ ವಿವಾಹದ ಮಂಗಳಕ್ಕೋಸ್ಕರ, ಸ್ತ್ರೀಪುರುಷರ ಮಾನಸಂರಕ್ಷಣೆಗೋಸ್ಕರ, ಪ್ರಾಣಿಹತ್ಯೆಯನ್ನು ತಪ್ಪಿಸುವುದಕ್ಕೋಸ್ಕರ, ಜೀವನಸಾಮಗ್ರಿಯ ನಷ್ಟವನ್ನು ನಿಲ್ಲಿಸುವುದಕ್ಕೋಸ್ಕರ, ಧರ್ಮವ್ಯವಸ್ಥೆಯನ್ನು ಸಮಗ್ರವಾಗಿ ಕಾಪಾಡುವುದಕ್ಕೋಸ್ಕರ—ಈ ಐದು ಮಹೋದ್ದೇಶಗಳಿಗಾಗಿ ಹೇಳಬೇಕಾಗಿ ಬಂದ ಅನೃತವು ಪಾಪವಾಗಲಾರದು.]

## ಕೌಶಿಕೋಪಾಖ್ಯಾನ

ಒಂದಾನೊಂದು ಮಾತು ಬಾಹ್ಯರೂಪದಲ್ಲಿ ಸತ್ಯವಾಗಿರಬಹುದು; ಕಾರ್ಯಪರಿಣಾಮದಲ್ಲಿ ಅಧರ್ಮ ಹೇತುವಾಗಬಹುದು. ಶ್ರೀಕೃಷ್ಣನೇ ಅರ್ಜುನನಿಗೆ ಒಂದು ಉಪಾಖ್ಯಾನವನ್ನು ಹೇಳುತ್ತಾನೆ:—

“ ಒಂದಾನೊಂದು ಕಾಡಿನಲ್ಲಿ ಕೌಶಿಕನೆಂಬ ಋಷಿ ತಪಸ್ಸು ಮಾಡಿಕೊಂಡಿದ್ದನಂತೆ. ಆತನು ಸತ್ಯವಾದಿ. ಒಂದಾನೊಂದು ದಿನ ಆತನ ಆಶ್ರಮದ ಮುಂದೆ ಕೆಲಮಂದಿ ಪ್ರಯಾಣಿಕರು ಓಡಿಹೋದರು. ಸ್ವಲ್ಪ ಹೊತ್ತಾದ ಬಳಿಕ ಕೆಲಮಂದಿ ಕಳ್ಳರು ಆತನ ಬಳಿಗೆ ಬಂದು “ ಇತ್ತಕಡೆ ಯಾರಾದರೂ ಹೋದರೆ? ನಿಜ ಹೇಳು ” ಎಂದು ಕೇಳಿದರು. ಕೌಶಿಕನು ಸತ್ಯಸಂಧನಾದದ್ದರಿಂದ “ ಹೌದು, ಅಗೋ ಅಲ್ಲಿ ಕಾಣುತ್ತಿರುವ ಪೊದೆ ತೋಪುಗಳ ಕಡೆ ಕೆಲವುಮಂದಿ ಹೋದರು ” ಎಂದು ಹೇಳಿದ. ಆ ದಸ್ಯುಗಳು ಆ ಮಾತಿನಿಂದ ತೃಪ್ತರಾಗಿ ಕೌಶಿಕನು ಹೇಳಿದ ದಾರಿಯನ್ನು ಹಿಡಿದುಹೋಗಿ, ಆ ನಿರಪರಾಧಿ ಪ್ರಯಾಣಿಕರನ್ನು ಹಿಡಿದು ತಮ್ಮ ಇಷ್ಟವನ್ನು ನೆರವೇರಿಸಿಕೊಂಡರು. ಕೌಶಿಕನ ಸತ್ಯವಾಕ್ಯದ ಫಲ ಏನಾಯಿತು? ಅರ್ಜುನ, ನೀನು ಗಾಂಡೀವವನ್ನು ಕುರಿತು ಮಾಡಿರುವ ಪ್ರತಿಜ್ಞೆಯ ಸತ್ಯವೂ ಅಂಥಾದ್ದೇ ! ”

ಕೃಷ್ಣನು ಹೇಳಿದ್ದು ಧರ್ಮಸೂಕ್ಷ್ಮ. ಈ ಸೂಕ್ಷ್ಮವನ್ನು ಅರಿಯಿಸುವ ವಿಚಾರಮಾರ್ಗವೇ ವಿವೇಕ. ಆ ವಿವೇಕದಿಂದ ಕೂಡಿದ ಶೀಲವೇ ಶೀಲ. ಅಂಥ ವಿವೇಕ ಶೀಲಗಳನ್ನು ಸ್ವಾಭಾವಿಕವನ್ನಾಗಿ ಮಾಡಿಕೊಂಡಿರುವವನೇ ಸುಸಂಸ್ಕೃತ ಮನುಷ್ಯ.

ಒಂದುನೂರು ಹಣ್ಣುಗಳ ಬಾಳೆಯ ಗೊನೆಯಲ್ಲಿ ಯಾವುದೋ ಒಂದು ಹಣ್ಣಿನ ಒಂದು ತೊಟ್ಟಿನಲ್ಲಿ ಅಮೃತಬಿಂದು ಇರುತ್ತದೆಂದು ಜನ ಹೇಳುವುದುಂಟು. ಒಂದು ಕೊಳಗದಷ್ಟು ಅರಳು ಹಿಟ್ಟಿನಲ್ಲಿ ಜೀವಪೋಷಕ ಸಾಮಗ್ರಿ ಒಂದು ಸಾಸಿವೆಯಷ್ಟು ಅಡಗಿಕೊಂಡಿರುತ್ತದೆ. ಹಾಗೆ ಒಂದು ಬಂಡಿ ಆಚಾರನಿಯಮಗಳಲ್ಲಿ ಧರ್ಮಸೂಕ್ಷ್ಮವೆಂಬುದು ಒಂದು ರವೆಯಷ್ಟು ಎಲ್ಲೋ

ಇದ್ದುಕೊಂಡು ಅದರಲ್ಲೆಲ್ಲಾ ವ್ಯಾಪಿಸಿರುತ್ತದೆ. ಆ ಧರ್ಮಾಂಶದ ಸೂಕ್ಷ್ಮರೇಣುವೇ ಶ್ರೇಯಸ್ಸಿನ ಜೀವಾಳ. ಧರ್ಮವೆಂಬುದರ ಧರ್ಮತ್ವ ನೆಲಸಿರುವುದು ಆ ರೇಣುಕಣದಲ್ಲಿ. ಆ ರೇಣು ಯಾವ ನಡವಳಿಕೆಯಲ್ಲಿ ವ್ಯಾಪಿಸಿರುತ್ತದೆಯೋ ಅದೇ ಧರ್ಮ. ಬಾಹ್ಯಾಚಾರಗಳು ಧರ್ಮಕ್ಕೆ ಬರಿಯ ಒಡಲು. ಒಡಲು ಅವಶ್ಯ ; ಆದರೆ ಒಡಲು ಮಾತ್ರವೇ ಸಾಲದು. ಒಳಗೆ ಜೀವಾಳವೂ ಇರಬೇಕು. ಆ ಧರ್ಮಜೀವಾಳದ ಜ್ಞಾನವೇ ನಮಗೆ ಸಂಸ್ಕೃತಿಯಿಂದ ದೊರೆಯಬೇಕಾದ ಸ್ಪರ್ಶಮಣಿ.

---

# ವಿವಿಧ ಸುಗುಣ ಸಮನ್ವಯ

ಧರ್ಮಗಳಿಗೆಲ್ಲ ಜೀವಾಳಪ್ರಾಯವಾದ ಸತ್ಯದ ಅನುಷ್ಠಾನದಲ್ಲಿಯೇ ಸಂವರಣ ಸಂಕೋಚನಗಳು ಹೀಗೆ ಅವಶ್ಯವಾಗಿರುವಲ್ಲಿ ನಮ್ಮ ಉಳಿದ ಗುಣಗಳ ಪ್ರಕಟೀಕರಣದಲ್ಲಿ ನಾವು ಎಷ್ಟು ಮಟ್ಟಿಗೆ ಜಾಗರೂಕರಾಗಿರಬೇಕೆಂಬುದನ್ನು ಬಹು ಮಾತುಗಳಿಂದ ಹೇಳಬೇಕಾಗಿಲ್ಲ. ನಾವು ಶ್ರೇಷ್ಠಗುಣವೆಂದು ಕೊಂಡಿರುವ ಯಾವ ಗುಣವೂ ಒಂದು ನಯವಿಧಿಗೆ ಒಳಪಡದಿದ್ದರೆ ಶ್ರೇಷ್ಠಪರಿಣಾಮವನ್ನು ಉಂಟುಮಾಡಲಾರದು. ಮಿತಪ್ರವರ್ತನೆಯೇ ಗುಣಸಾರ್ಥಕ್ಯದ ಮಾರ್ಗ. ಸುಗುಣಗಳಿಗೆ ವಿರೋಧಿಗಳಾದವು ದುರ್ಗುಣಗಳೇ ಎಂಬ ಭಾವನೆ ನೀತಿತತ್ತ್ವದಲ್ಲಿ ಅರ್ಧ; ಅದರ ಮಿಕ್ಕರ್ಧ ಸುಗುಣಗಳಿಗೆ ಸುಗುಣಗಳನ್ನೇ ವಿರೋಧವಾಗಿಸುವಂಥ ಸನ್ನಿವೇಶಗಳು ಮನುಷ್ಯವ್ಯವಹಾರದಲ್ಲಿ ಒದಗಬಹುದೆಂಬುದು. ಉದಾಹರಣೆಯಾಗಿ ಈ ಕೆಳಗಿನ ಎರಡು ಸುಗುಣ ಪಟ್ಟಿಕೆಗಳನ್ನು ನೋಡೋಣ—

| (೧) | (೨) |
| --- | --- |
| ಪ್ರೌಢತೆ | ಸರಳತೆ |
| ಧೈರ್ಯ | ನಮ್ರತೆ |
| ದೃಢವಿಶ್ವಾಸ (ನಂಬಿಕೆ) | ಪರಪಕ್ಷ ವಿಚಾರ ಕುತೂಹಲ |
| ವೀರಪ್ರತಿಜ್ಞೆ | ಸ್ನೇಹ ಸಿದ್ಧತೆ |
| ಏಕಾಂತ ನಿಷ್ಠೆ | ನಾನಾ ಮತ ಸಮನ್ವಯಪರತೆ |
| ಸ್ವತಂತ್ರತೆ | ಪರಕೀಯರಲ್ಲಿ ಗೌರವ |
| ಸ್ವತತ್ತ್ವವೀರವ್ರತ | ಪರಲೋಪಕ್ಷಮೆ |

ಈ ಮೇಲಿನ ಎರಡು ಪಟ್ಟಿಗಳಲ್ಲಿ ಉಭಯಜಾತಿಗಳ ಗುಣಗಳೂ ಏಕಪ್ರಕಾರವಾಗಿ ಉಪಾದೇಯಗಳೇ ಸರಿ. ಆದರೆ ಆಪಾತ ದೃಷ್ಟಿಗೆ ಒಂದೊಂದು ಅಡ್ಡಸಾಲಿನ ಜೋಡಿಜೋಡಿಯೂ ಪರಸ್ಪರ ವಿಷಮಿಸುವಂತೆ ಕಾಣುತ್ತವೆ. ಪಾಂಡಿತ್ಯ ಪ್ರೌಢಿಯೂ ಪ್ರಾಕೃತ ಜನದ ಸರಳವರ್ತನೆಯೂ ಒಬ್ಬನಲ್ಲಿಯೇ ಹೊಂದಿಕೊಂಡಿರುವುದು ಸಾಮಾನ್ಯವಲ್ಲ. ಹಾಗೆಯೇ ಸ್ವಮತ ಶ್ರದ್ಧೆಯೂ ಪರಮತ ಸಹನೆಯೂ ಕೂಡಿಕೊಂಡಿರುವುದು ಸುಲಭವಲ್ಲ. ಸ್ವತಂತ್ರ ಬುದ್ಧಿಯೂ ಮತ್ತೊಬ್ಬರ ಅಭಿಪ್ರಾಯವನ್ನು ಪುರಸ್ಕರಿಸಿ ಕೇಳುವ ಅಭ್ಯಾಸವೂ ಒಟ್ಟಿಗಿರುವುದು ಸಾಧಾರಣವಲ್ಲ. ಹೀಗೆ, ತಾನೊಂದೇ ಪ್ರತ್ಯೇಕವಿದ್ದಾಗ ಶ್ಲಾಘ್ಯವೆನಿಸುವ ಗುಣ ತನ್ನಷ್ಟೇ ಶ್ಲಾಘ್ಯವಾದ ಇನ್ನೊಂದು ಗುಣದೊಡನೆ ಬೆರೆಯಬೇಕೆಂದರೆ ಆಗ ಬಗ್ಗದೆ ಹಟ ತೊಟ್ಟು ನಿಲ್ಲುತ್ತದೆ. ತಾಯಮೇಲಿರುವ ಭಕ್ತಿ ಧರ್ಮದ ಗುಣ. ಹೆಂಡತಿಯ ಮೇಲಿರುವ ಪ್ರೀತಿಯೂ ಧರ್ಮದ ಗುಣವೇ. ಆದರೆ ತಾಯೂ ಹೆಂಡತಿಯೂ ಕಾದಾಟಕ್ಕೆ ನಿಂತಾಗ ಮನುಷ್ಯನಲ್ಲಿ ಕೂಡಿಕೊಂಡಿರಬೇಕಾದ ಮಾತೃಭಕ್ತಿಯೂ ಭಾರ್ಯಾಪ್ರೀತಿಯೂ ಒಡೆದು ಬೇರೆಬೇರೆಯಾಗುತ್ತವೆ. ಇಂಥ ಸಮಯದಲ್ಲಿ ಔಚಿತ್ಯ

ವನ್ನರಿತು ಅವುಗಳೆರಡನ್ನೂ ಸಮಗೂಡಿಸುವ ಯತ್ನ ಸಂಸ್ಕೃತಿಯದು.

ಸ್ವದೇಶಪ್ರೇಮ ಸ್ವಜನಾಭಿಮಾನಗಳು ಧರ್ಮಗುಣಗಳೇ. ಸರ್ವಲೋಕಹಿತಚಿಂತೆಯೂ ಸಮಸ್ತಜನ ಸಹಾನುಭೂತಿಯೂ ಧರ್ಮಗುಣಗಳೇ. ಆದರೆ, ಹತ್ತಿರದ ಅಭಿಮಾನ ಎದ್ದು ಗದ್ದಲಮಾಡುವಾಗ ದೂರದ ನ್ಯಾಯವನ್ನು ಜ್ಞಾಪಕದಲ್ಲಿರಿಸಿಕೊಳ್ಳುವುದು ಸಂಸ್ಕೃತವಾದ ಬುದ್ಧಿಗೆ ಮಾತ್ರ ಸಾಧ್ಯ.

ಮನುಷ್ಯಜೀವನವು ಸಮೃದ್ಧವಾಗಿ ಸುಖಮಯವಾಗಬೇಕಾದರೆ, ಒಂದೆರಡು ಗುಣಗಳ ವಿಕಾಸ ಮಹಿಮೆ ಸಾಲುವುದಿಲ್ಲ. ನೂರಾರು ಗುಣಗಳು ಅನ್ಯೋನ್ಯ ಮೈತ್ರಿಯಿಂದ ಸಮ್ಮಿಳಿತವಾಗಬೇಕು.

ಹಾಗೆಯೇ ನಮ್ಮ ಜೀವನದ ನಿಷ್ಠೆಗಳು ನೂರಾರು. ನಮ್ಮ ಧ್ಯೇಯಗಳು ಎಂಟು ದಿಕ್ಕುಗಳಿಗೂ ಚಾಚಿಕೊಂಡಿರುತ್ತವೆ. ನಮ್ಮ ಪ್ರೀತಿಗಳು ಹತ್ತುಕಡೆ ಗಂಟುಹಾಕಿಕೊಂಡಿರುತ್ತವೆ. ನಾವು ಅವುಗಳಲ್ಲಿ ಯಾವ ಒಂದನ್ನೂ ಬಿಡಲಾಗುವುದಿಲ್ಲ. ಆದಕಾರಣವೇ ಯಾವ ಒಂದನ್ನೂ ಮಿತಿಮೀರಿ ಬೆಳಸಲೂ ಆಗುವುದಿಲ್ಲ. ಅವುಗಳಲ್ಲಿ ಒಂದು ಇನ್ನೊಂದಕ್ಕೆ ಮಿತಿಕಾರಕವಾಗುತ್ತದೆ. ಈ ಮಿತಿ ವಿವೇಚನೆಯ ಮೂಲಕ ಸಾಧಿಸಲಾಗುವ ವಿವಿಧ ನಿಷ್ಠಾಸಮನ್ವಯವೇ,—ನಾನಾ ಪ್ರೇಮ ಸಾಮರಸ್ಯವೇ,—ಸಂಸ್ಕೃತಿಗಿರುವ ಕಾರ್ಯ.

ಸಂಸ್ಕೃತಿಯು ಜೀವನಕ್ಷೇತ್ರವನ್ನೆಲ್ಲ ಒಂದೇ ಒಂದನ್ನಾಗಿ ಮಾಡಿ, ಒಂದೇ ಒಂದು ಅಖಂಡವಸ್ತುವನ್ನಾಗಿ ಕಾಣುತ್ತದೆ. ಸುಸಂಸ್ಕೃತ ಮನುಷ್ಯನು ತನ್ನ ಕ್ಷೇಮವನ್ನು ಊರಿನ ಕ್ಷೇಮದ ಒಂದು ಲವಾಂಶವನ್ನಾಗಿ,—ಊರಿನ ಬಾಳನ್ನು ದೇಶಜೀವನದ ಒಂದು ಕಣಮಾತ್ರವಾಗಿ,—ದೇಶಚರಿತ್ರೆಯನ್ನು ಮಾನವ

ಲೋಕದ ಒಂದು ಸಣ್ಣ ಭಾಗವನ್ನಾಗಿ,—ಭೂಮಂಡಲವನ್ನು ವಿಶ್ವದ ಒಂದು ಅಂಗಮಾತ್ರವನ್ನಾಗಿ ಗಣಿಸಲು ಅಭ್ಯಾಸ ಮಾಡಿರುತ್ತಾನೆ. ತಾನು ಉಸಿರುವ ಉಸಿರನ್ನು ಆಕಾಶದ ಮೋಡಗಳಿಗೆ ಸಂಬಂಧಮಾಡಿ ನೋಡುತ್ತಾನೆ. ತನ್ನ ಮುಂದೆ ಆಡುತ್ತಿರುವ ಮಗುವಿನ ಕಣ್ಣನ್ನು ನಕ್ಷತ್ರದ ಒಡಹುಟ್ಟೆಂದು ಭಾವಿಸುತ್ತಾನೆ. ಇಂಥ ಭಾವ ವಿಶಾಲತೆಯು ಸಂಸ್ಕೃತಿಯಿಂದ ನಾವು ಪಡೆಯಬಹುದಾದ ವರ.

---

## ಸಂಸ್ಕೃತಿಯ ಮೂಲಸ್ಥಾನಗಳು

ಸಂಸ್ಕೃತಿಯ ಮೂಲಸ್ಥಾನಗಳು ಒಂದಲ್ಲ, ಎರಡಲ್ಲ, ಒಂದು ನೂರು. ಅವುಗಳನ್ನು ಆರು ಗಣಗಳಾಗಿ ವಿಂಗಡಿಸಬಹುದು.

(೧) ದೈವ ಮತಧರ್ಮ—ಇದರಲ್ಲಿ ಶ್ರುತಿ ಸ್ಮೃತಿ ಪುರಾಣಗಳಲ್ಲಿರುವಂಥ ಅತೀಂದ್ರಿಯ ತತ್ತ್ವ ಜಿಜ್ಞಾಸೆಗಳೂ ಅವುಗಳಿಂದ ಉದಿಸಿದ ನಾನಾ ವಿಧವಾದ ಸಿದ್ಧಾಂತಗಳೂ ವ್ರತನಿಯಮಾದಿ ಆತ್ಮಶೋಧನ ವಿಧಾನಗಳೂ ಆಚಾರನಿಯಮಗಳೂ ಸೇರಿವೆ.

(೨) ಸಾಹಿತ್ಯಾದಿ ಸರಸಕಲೆ—ಇದರಲ್ಲಿ ಕಾವ್ಯನಾಟಕಾದಿ ರಾಗಭಾವಪ್ರಧಾನಗಳಾದ ಕಲ್ಪನಾಲೋಕಗಳೂ, ಸಂಗೀತ ಶಿಲ್ಪ ನರ್ತನ ಮೊದಲಾದ ಹೃದಯಾನುಭವ ಕರಣಗಳೂ ಸೇರಿವೆ.

(೩) ವಿಜ್ಞಾನ—ಇದರಲ್ಲಿ ಭೌತಶಾಸ್ತ್ರ ಜೀವಶಾಸ್ತ್ರ ಮೊದಲಾದ ಸೃಷ್ಟಿತತ್ತ್ವಾನ್ವೇಷಣೆಗಳೂ ರಾಜ್ಯಶಾಸ್ತ್ರ ಅರ್ಥಶಾಸ್ತ್ರ ಮೊದಲಾದ ಮನುಷ್ಯ ಸ್ವಭಾವಶಿಕ್ಷೆಯ ಪ್ರಯತ್ನಗಳೂ ಸೇರಿವೆ.

(೪) ದೇಶವಿದೇಶ ಚರಿತ್ರೆ ಮತ್ತು ಮಹಾಪುರುಷವೃತ್ತಾಂತ.

(೫) ಸ್ವಸಮಾಜಪ್ರಭಾವ—ತನ್ನ ಕುಲದ, ಜಾತಿಯ, ಕೋಮಿನ ವಾತಾವರಣ; ತನ್ನೂರಿನ, ತನ್ನ ರಾಜ್ಯದ ವಾತಾವರಣ; ತನ್ನ ಕಸಬಿನ, ತನ್ನ ಮಿತ್ರಗೋಷ್ಠಿಯ ವಾತಾವರಣ— ಈ ನಾನಾ ವಲಯಾಂತರ್ವಲಯಗಳ ವಾತಾವರಣಗಳು ಪ್ರತಿಯೊಬ್ಬನ ಶೀಲಸ್ವಭಾವಗಳ ಮೇಲೂ ಪರಿಣಾಮಮಾಡುತ್ತಿರುತ್ತವೆ. ವ್ಯಕ್ತಿಸಂಸ್ಕೃತಿಯು ಸಮಾಜಸಂಸ್ಕೃತಿಯ ಪ್ರಭಾವವನ್ನು ಪೂರ್ತಿಯಾಗಿ ತಪ್ಪಿಸಿಕೊಳ್ಳಲಾಗುವುದಿಲ್ಲ. ಸಮಾಜಸಂಸ್ಕೃತಿಯೆಂಬುದೂ ವ್ಯಕ್ತಿಸಂಸ್ಕೃತಿಗಳ ಅನ್ಯೋನ್ಯ ವಿಪರಿಣಾಮದ ಫಲಿತಾಂಶ. ಸಮಾಜವು ಸುಸಂಸ್ಕೃತವಾಗಿದ್ದಷ್ಟೂ ವ್ಯಕ್ತಿಸಂಸ್ಕೃತಿ ಶ್ರೇಷ್ಠವಾಗುತ್ತದೆ.

(೬) ಮನುಷ್ಯನ ಅಂತರಂಗದ ಆತ್ಮಪರಿಶೋಧನೆ ಆತ್ಮಸಂಯಮಗಳು. ಇದರಿಂದ ಅವನ ಅಭಿರುಚಿಗಳಲ್ಲಿ ಸಹಜವಾಗಿದ್ದ ಒರಟುತನ ಕೊಳಕುತನಗಳು ಹೋಗಿ ಅವು ಪರಿಶುದ್ಧವಾಗುತ್ತವೆ. ಹಾಗೆ ಅವನು ನಾನಾ ಪದಾರ್ಥಗಳಿಗೆ ಕಟ್ಟುವ ಬೆಲೆ ಒಂದು ಸೂಕ್ಷ್ಮವಿವೇಕದ್ದಾಗುತ್ತದೆ. ಅವನ ತಾರತಮ್ಯನಿರ್ಣಯ ಸಾಧುವಾಗುತ್ತದೆ.

ಮೊದಲಿನ ಐದೂ ಪರಿಣಾಮ ಹೊಂದುವುದು ಆರನೆಯದರಲ್ಲಿ. ಒಂದು ಕಡೆ ಬುದ್ಧಿಗೆ ಸಂಸ್ಕಾರ, ಮತ್ತೊಂದು ಕಡೆ ಹೃದಯಕ್ಕೆ ಸಂಸ್ಕಾರ,—ಈ ಎರಡು ಬಗೆಯ ಸಂಸ್ಕಾರಗಳಿಂದ ಪರಿಪಕ್ವವಾಗತಕ್ಕದ್ದು ಜೀವದ ಅಂತರಂಗ. ಹಾಗೆ ಪರಿಪಕ್ವವಾದ ಜೀವವು ಜಗತ್ತಿನೊಳಕ್ಕೆ ಉಸಿರುವ ಸುಗಂಧವೇ ಸಂಸ್ಕೃತಿ.

ಸಂಸ್ಕೃತಿಯೆಂಬುದು ಸರಳವಸ್ತುವಲ್ಲ, ಸಂಮಿಶ್ರಿತ ವಸ್ತು. ಅದರ ಘಟಕದ್ರವ್ಯ ಏಕವಲ್ಲ, ಅನೇಕ. ಅದು ನಾನಾ ಗುಣ

ನಾನಾ ಪ್ರಭಾವಗಳ ಘರ್ಷಣೆ ವ್ಯವಸ್ಥಾಪನೆಗಳ ಫಲಿತಾಂಶ. ಅದು ನಾಲ್ಕಾರು ಬಗೆಯ ಹೂಗಳನ್ನು ಜೋಡಿಸಿ ಕಟ್ಟಿದ ತುರಾಯಿಯಂತೆ; ಅಥವಾ ಪುನುಗು ಪಚ್ಚಕರ್ಪೂರ ಜವ್ವಾಜಿ ಕೇಸರಿಗಳನ್ನು ಕಲಸಿ ಮಾಡಿದ ಪರಿಮಳದಂತೆ. ಆ ಅಂತರ್ದ್ರವ್ಯಗಳ ನಾನಾತ್ವದಿಂದಲೇ ಅದರ ಸ್ವಾರಸ್ಯ. ಸೊಗಸಿರುವುದು ಪದಾರ್ಥಗಳ ಗುಣಸಾದೃಶ್ಯ ರೂಪಸಾದೃಶ್ಯಗಳಲ್ಲಲ್ಲ; ಅವುಗಳ ಗುಣಭೇದ ರೂಪಭೇದಗಳ ಅನ್ಯೋನ್ಯ ಸ್ನೇಹಸಹಕಾರಗಳಲ್ಲಿ. ಯಾವ ಒಂದು ರೂಪವೂ ಯಾವ ಒಂದು ಗುಣವೂ ತಾನೊಂದೇ ಆಗಿದ್ದಾಗ ಸೊಗಸಿಗೆ ಸಾಲದು. ಸೊಗಸು ನಿಜವೆನಿಸುವುದಕ್ಕೂ ಪೂರ್ತಿಯಾಗುವುದಕ್ಕೂ ಎರಡು ಸಂಗತಿಗಳು ಆವಶ್ಯಕ. (೧) ರೂಪಗುಣಗಳು ಅನೇಕವಿದ್ದು, ಒಂದೊಂದು ರೂಪವೂ ಒಂದೊಂದು ಗುಣವೂ ತನ್ನ ಮಟ್ಟಿಗೆ ತಾನು ಕೂಡಿದಷ್ಟು ಚೆನ್ನಾಗಿ ಎದ್ದು ನಿಲ್ಲಬೇಕು; ಮತ್ತು (೨) ಪ್ರತಿಯೊಂದೂ ತನ್ನ ನೆರೆಹೊರೆಯ ರೂಪ ಗುಣಗಳೊಡನೆ ಬೆರೆತು, ಒಟ್ಟಿನ ಸೊಗಸಿಗೆ ಅನುಕೂಲವಾಗುವಂತೆ ತನ್ನ ಭಾವಚರ್ಯೆಗಳನ್ನು ಪರಿಷ್ಕಾರಮಾಡಿಕೊಳ್ಳಬೇಕು. ಹೀಗೆ ಪರಿಮಾಣೌಚಿತ್ಯ, ಸಂಮೇಳಸಿದ್ಧತೆ—ಇವೆರಡೂ ಆ ನಾನಾ ದ್ರವ್ಯಗಳಲ್ಲಿರಬೇಕು.

ಆರೋಗ್ಯವಂತನ ಶರೀರದ ಅವಯವಗಳಲ್ಲಿ ಈ ಎರಡು ಲಕ್ಷಣಗಳೂ ಕಾಣಬರುತ್ತವೆ. ತೋಳು ಬಲವಾಗಿರುತ್ತದೆ; ಆದರೆ ಕಾಲಿಗೆ ಸಲ್ಲಬೇಕಾದ ಪುಷ್ಟಿಯನ್ನು ಅದು ತಿಂದು ಹಾಕುವುದಿಲ್ಲ. ಕಣ್ಣು ಸೂಕ್ಷ್ಮಗ್ರಾಹಿಯಾಗಿರುತ್ತದೆ; ಆದರೆ ಕಿವಿಯ ಶಕ್ತಿಯನ್ನು ಅದು ಮಂದಮಾಡುವುದಿಲ್ಲ. ಅಂಗಾಂಗಗಳಲ್ಲಿ ಒಂದು ಅನ್ಯೋನ್ಯ ಸ್ನೇಹದೃಷ್ಟಿಯಿರುತ್ತದೆ. ಆದರಿಂದಲೇ ಅನುರೂಪತೆ; ಅದೇ ಆನುಗುಣ್ಯ, ಅದೇ ಔಚಿತ್ಯ.

---

# ವ್ಯಕ್ತಿ ಮತ್ತು ಸಮಾಜ

ಸಂಸ್ಕೃತಿಯು ವ್ಯಕ್ತಿಜನ್ಯವೆ, ಸಮಾಜಜನ್ಯವೆ? ವ್ಯಕ್ತಿ ನಿಷ್ಠವೆ, ಸಮಾಜ ನಿಷ್ಠವೆ? ಈ ಪ್ರಶ್ನೆಯು ವ್ಯಕ್ತಿಯೂ ಸಮಾಜವೂ ಬೇರೆಬೇರೆಯಾದವು ಮತ್ತು ಒಂದನ್ನೊಂದು ಬಿಟ್ಟಿರಬಲ್ಲವು ಎಂಬ ಪೂರ್ವಭಾವನೆಯಿಂದ ಏಳುತ್ತದೆ. ಲೋಕಾನುಭವವುಳ್ಳವರಿಗಾದರೋ ಆ ಭೇದಭಾವನೆ ನಿರಾಧಾರವಾದದ್ದೆಂಬುದು ಸ್ಪಷ್ಟವಾಗಿದೆ. ಮನೆ, ಕುಲ, ಉದ್ಯೋಗ, ರಾಜ್ಯವ್ಯವಸ್ಥೆ—ಇವೆಲ್ಲವೂ ವ್ಯಕ್ತಿಯ ಮೇಲೆ ಕ್ಷಣಕ್ಷಣವೂ ಪ್ರಭಾವ ಬೀರುತ್ತವೆ. ವ್ಯಕ್ತಿಯೂ ಅವನಿಂದಾದಷ್ಟು ಪ್ರಭಾವವನ್ನು ಹಾಗೆಯೇ ಅವುಗಳ ಮೇಲೆ ಸಂತತವಾಗಿ ಬೀರುತ್ತಿರುತ್ತಾನೆ. ಹೀಗೆ ವ್ಯಕ್ತಿಸಮಸ್ತಗಳ ಅನ್ಯೋನ್ಯ ವಿಪರಿಣಾಮದಿಂದ ಸಂಸ್ಕೃತಿ ರೂಪುಗೊಳ್ಳುತ್ತಿರುತ್ತದೆ.

ಮನುಷ್ಯಲೋಕದಲ್ಲಿ ಕುಲ, ಜಾತಿ, ಜನಪದ, ರಾಜ್ಯ ಮೊದಲಾದ ನಾನಾ ವಿಭಾಗಗಳುಂಟಷ್ಟೆ? ಈ ವಿಭಾಗಗಳು ಮೊದಮೊದಲು ಪ್ರಕೃತಿ ಸಿದ್ಧವಾದ ಕಾರಣಗಳಿಂದ ಉಂಟಾದವು. ಭೂಗುಣ ವಾಯುಗುಣಗಳು ಜನದ ದೇಹಸ್ವಭಾವವನ್ನೂ ಮನಃಪ್ರವೃತ್ತಿಯನ್ನೂ ರೂಪಗೊಳಿಸಿರುತ್ತವೆ. ಅನಂತರ ಅವರ ಮತವಿಶ್ವಾಸಗಳು ಅವರ ಮನೋವೃತ್ತಿಯನ್ನು ತಿರುಗಿಸುತ್ತವೆ. ಅವರ ಆರ್ಥಿಕ ಪರಿಸ್ಥಿತಿಯೂ ಉದ್ಯೋಗ ಸಂದರ್ಭಗಳೂ ಅವರ ಶೀಲಸ್ವಭಾವಗಳನ್ನು ತಿದ್ದುತ್ತವೆ. ಹಾಗೆಯೇ ದೇಶಚರಿತ್ರೆಯೂ ಅವರ ಗುಣಾವಗುಣಗಳನ್ನು ನಿಷ್ಕರ್ಷೆಪಡಿಸುತ್ತದೆ. ಹೀಗೆ ನಾನಾ ಸ್ವತಸ್ಸಿದ್ಧಕಾರಣಗಳಿಂದ ನಾನಾ ಜನಸಮುದಾಯಗಳಲ್ಲಿ ನಾನಾ ಆಚಾರಗಳೂ ವ್ಯವಹಾರಪದ್ಧತಿಗಳೂ ನೆಲೆಗೊಂಡಿರುತ್ತವೆ. ಈ ಅಭ್ಯಾಸಭೇದಗಳ ಮತ್ತು ಸಂಪ್ರದಾಯಭೇದಗಳ

ಆಧಾರದ ಮೇಲೆ ಆಗಿರುವುವು ವಂಶ ಜನಪದ ವರ್ಗ ಜಾತಿಗಳ ಭೇದಗಳು. ಈ ಪಂಗಡಗಳು ಯಾರೋ ಒಬ್ಬನು, ಅಥವಾ ಒಂದು ಗುಂಪು, ಹುಟ್ಟುಹಾಕಿದ ಕೃತ್ರಿಮ ವಿಭಜನೆಯಲ್ಲ. ಒಟ್ಟಿಗಿದ್ದ್ದನ್ನು ಯಾರೂ ಒಡೆದುಹಾಕಿಲ್ಲ. ಹುಟ್ಟಿನಲ್ಲಿಯೇ ವೊಳಕೆ ಹತ್ತು ಕಾಂಡಗಳಾಗಿತ್ತು. ಅದು ಕೊರತೆಯುಂಟುಮಾಡಬೇಕಾದ ಸಂಗತಿಯೂ ಅಲ್ಲ. ಆ ಹತ್ತಾರ ಹತ್ತುಬಗೆಯಿಂದಲೇ ಆ ಪೊದೆಯ ಸೊಗಸು. ನಮಗೆ ಅಪೇಕ್ಷಣೀಯವಾದದ್ದು ವೈವಿಧ್ಯದ ವಿನಾಶ ವಲ್ಲ, ಸಂಮಿಳಿತತೆ;—ಏಕತೆಯಲ್ಲ, ಸಮರಸತೆ. ಸಾರು ರುಚಿ ಯಾಗಬೇಕಾದರೆ ಉಪ್ಪೂ ಹುಳಿಯೂ ಮೆಣಸಾಗಬೇಕಾದ ದ್ದಿಲ್ಲ; ಮೆಣಸೂ ಹುಳಿಯೂ ಉಪ್ಪಾಗತಕ್ಕದ್ದಲ್ಲ; ಆ ಮೂರೂ ಬೆಲ್ಲವಾಗಬೇಕೆಂಬುದೂ ಇಲ್ಲ. ಆಯಾ ದ್ರವ್ಯ ಆಯಾ ರುಚಿ ಯನ್ನೇ ಇಟ್ಟುಕೊಂಡಿರಬೇಕು, ಆದರೆ ಸರಿ ಬೆರೆಯಬೇಕು. ಆ ಸಂಬೆರಕೆಯೇ ಸಾರಿನ ಸೊಗಸು. ಈ ಮರ್ಮವನ್ನರಿತವರು ಈಗ ಅಲ್ಲಲ್ಲಿ ಕೇಳಬರುವ "ವರ್ಗರಹಿತ ಸಮಾಜ" "ಜಾತಿಶೂನ್ಯ ಸಮಾಜ" ಎಂಬ ಕೂಗುಗಳನ್ನು ಕುರುಡು ಕೂಗೆನ್ನದೆ ಇರರು.

ರಷ್ಯಕ್ಕೂ ಅಮೆರಿಕಕ್ಕೂ ನಡುವೆ ಕುಲಗೋತ್ರಗಳ ಗೋಡೆ ಯಿಲ್ಲ; ಅಲ್ಲಿ ಭೋಜನ ವಿವಾಹಗಳು ಶಾಸ್ತ್ರ ನಿಷಿದ್ಧವಲ್ಲ. ಅವೆ ರಡೂ ಏಕೆ ಏಕರಾಜ್ಯವಾಗಬಾರದು? ಅಥವಾ ಮಿತ್ರರಾದರೂ ಆಗಬಾರದು? ಫ್ರಾನ್ಸೂ ಇಂಗ್ಲೆಂಡೂ ಏಕೆ ಏಕವಾಗಬಾರದು? ಯೂರೋಪ್ ಎಲ್ಲ ಏಕೆ ಒಂದೇ ಸಮಾಜವಾಗಬಾರದು? ಹಾಗಾಗಲಾರದು; ಕಾರಣವೇನೆಂದರೆ ಆ ನಾನಾ ಸಮುದಾಯ ಗಳ, ಗುಂಪುಗಳ, ಪಂಗಡಗಳ ನಿರ್ಮಾಣಕ್ಕೆ ಮೂಲಕಾರಣ ವಾದದ್ದು ಕೆಲವು ನೈಸರ್ಗಿಕ ಸಂದರ್ಭಗಳು. ಅವುಗಳನ್ನು ಬದಲಾಯಿಸುವುದು ಇಂದು ಸಾಧ್ಯವಾಗದು. ಎಂದು ಭೂಮಿ ಗುಂಡಾಗಿರುವುದು ಹೋಗಿ ಚಾಪೆಯಂತೆ ಚಪ್ಪಟೆಯಾಗುತ್ತ

ದೆಯೋ, ಎಂದು ಸೂರ್ಯಕಿರಣವು ಇಂಡಿಯದ ಮೇಲೆ ಕಾದಂತೆಯೇ—ಅದೇ ಪರಿಣಾಮದಲ್ಲಿ ಅದೇ ಹೊತ್ತಿನಲ್ಲಿ—ಸೈಬೀರಿಯದ ಮೇಲೂ ಕಾಯುತ್ತದೆಯೋ, ಎಂದು ಗಾಳಿಯೂ ಮೋಡವೂ ಎಲ್ಲ ದೇಶಪ್ರದೇಶಗಳಲ್ಲಿಯೂ ಒಂದೊಂದು ನಿಮಿಷವೂ ಒಂದೇ ವೇಗದಿಂದ ಒಂದೇ ತಣುವಿನಿಂದ ಓಡಾಡುತ್ತವೆಯೋ ಅಂದು ಮನುಷ್ಯಪ್ರಪಂಚದಲ್ಲೆಲ್ಲಾ ಭೇದಗಳು ನಿರ್ಮೂಲವಾಗಿ ಸರ್ವಸಮತ್ವ ಸಿದ್ಧಿಸೀತು. ಹಾಗಾಗುವವರೆಗೂ ಒಂದು ತೆರದಲ್ಲಲ್ಲದಿದ್ದರೆ ಮತ್ತೊಂದು ತೆರದಲ್ಲಿ ಜನಜನಾಂಗಭೇದ ಸಮಾಜಭೇದ ವರ್ಗಭೇದಗಳು ಅನಿವಾರ್ಯವಾಗಿರುತ್ತವೆ.

ವೈಜ್ಞಾನಿಕರು ಭೂರಚನೆಯಲ್ಲಿಯೂ ಅಂತರಿಕ್ಷ ಆಕಾಶಗಳ ರಚನೆಯಲ್ಲಿಯೂ ಒದಲಾವಣೆಗಳನ್ನು ತಂದು ಸೃಷ್ಟಿಯನ್ನೆಲ್ಲ ಏಕರೂಪ ಏಕಲಕ್ಷಣವನ್ನಾಗಿ ಮಾಡಲಾರರೆ? ಮಾಡಿಯಾರೋ ಏನೋ! ಹಾಗೆ ಮಾಡಿದರೆಂದರೆ ಅದಕ್ಕೂ ಪ್ರಲಯವೆಂಬುದಕ್ಕೂ ವ್ಯತ್ಯಾಸವೇನು? ಪ್ರಲಯವೂ ಏಕರೂಪ ಸ್ಥಿತಿಯೇ ಅಲ್ಲವೆ?—ಎಲ್ಲ ಸುಟ್ಟು ಒಂದೇ ಬೂದಿಯಾಗುವುದು? ಎಲ್ಲ ಕರಗಿ ಒಂದೇ ನೀರಾಗುವುದು! ಆಗ ನಾನಾತ್ವವಿಲ್ಲ; ಎಲ್ಲ ಅಖಂಡ; ಎಲ್ಲ ಏಕ; ಆದರೆ ಎಲ್ಲ ಜಡ; ಎಲ್ಲ ಶೂನ್ಯ.

ಜೀವವೆಂದರೆ ಜಡದ ಏಕಾವಸ್ಥೆಯಿಲ್ಲದೆ ನಾನಾ ಚೇಷ್ಟೆಗಳು ಮೆರೆಯುವುದು. ಯಾವ ಒಂದು ಪ್ರಾಣಿಯೂ ಪೂರ್ತಿಯಾಗಿ ಇನ್ನೊಂದು ಪ್ರಾಣಿಯಂತಲ್ಲ; ಯಾವ ಒಂದು ಜಾತಿಯೂ ಪೂರ್ತಿಯಾಗಿ ಇನ್ನೊಂದು ಜಾತಿಯಂತಲ್ಲ. ಒಂದೊಂದು ವ್ಯಕ್ತಿಯಲ್ಲಿಯೂ ಒಂದೊಂದು ಅಂಶವಿಶೇಷ. ಈ ವೈಶಿಷ್ಟ್ಯವೇ ವ್ಯಕ್ತಿತ್ವ. ವೈಶಿಷ್ಟ್ಯಗಳಿಂದಲೇ ಜೀವಲೋಕದ ಆಕರ್ಷಕತೆ.

---

# ಸಾಮಾನ್ಯ ಮತ್ತು ವಿಶೇಷ

ಒಬ್ಬ ಮನುಷ್ಯನು ಇನ್ನೊಬ್ಬನನ್ನು ಎಷ್ಟು ಮಟ್ಟಿಗೆ ಹೋಲುತ್ತಾನೋ ಅಷ್ಟು ಮಟ್ಟಿಗೆ ಅವರಿಬ್ಬರೂ ಸಮಾನರು. ಆ ಹೋಲಿಕೆಯ ಅಂಶಗಳು "ಸಾಮಾನ್ಯ" ಅಥವಾ "ಸಾಧಾರಣ."

ಒಬ್ಬನು ಇನ್ನೊಬ್ಬನನ್ನು ಎಲ್ಲಿ ಹೋಲದೆ ಎಷ್ಟು ಮಟ್ಟಿಗೆ ತಾನೇ ಬೇರೊಂದು ಬಗೆಯುವನಾಗಿರುತ್ತಾನೋ ಅಲ್ಲಿ ಅಷ್ಟು ಮಟ್ಟಿಗೆ ಅವರಿಬ್ಬರೂ ಎರಡು ವಿಶೇಷಗಳು. ಆ ಬೇರೆತನದ ಗುರುತುಗಳು "ವೈಶಿಷ್ಟ್ಯ".

ಪ್ರಪಂಚವೆಂಬುದು ಎಲ್ಲೆಲ್ಲೂ ಸಾಮಾನ್ಯ ವಿಶೇಷಗಳೆರಡೂ ಸೇರಿದ ಮಿಶ್ರಣ. ಹೀಗೆ:—

| ಸಾಮಾನ್ಯ | ವಿಶೇಷ |
|---|---|
| ಸೃಷ್ಟಿ | ಜಡ, ಜೀವ |
| ಜಡ | ನೆಲ, ನೀರು |
| ನೆಲ | ಕಲ್ಲು, ಮಣ್ಣು, ಲೋಹ |
| ಲೋಹ | ಚಿನ್ನ, ಕಬ್ಬಿಣ, ತಾಮ್ರ |
| ಜೀವ | ಮರ, ಮೃಗ, ಪಕ್ಷಿ, ಮನುಷ್ಯ |
| ಮರ | ಮಾವು, ಬೇವು, ಹಲಸು |
| ಮನುಷ್ಯ : ಗಂಡು, ಹೆಣ್ಣು | ಆರ್ಯ, ದ್ರಾವಿಡ, ಪರಂಗಿ, ನೀಗ್ರೊ |
| ,, | ಮಗು, ಪ್ರಾಯಸ್ತ, ಮುದುಕ |

ಸಾಮಾನ್ಯದಿಂದ ವರ್ಗ, ಅಥವಾ ಜಾತಿ, ಅಥವಾ ಸಮಾಜ.

ವಿಶೇಷದಿಂದ ವ್ಯಕ್ತಿ, ಅಥವಾ ಪ್ರತ್ಯೇಕ (ಪೃಥಕ್ತ್ವ).

ಜಗತ್ಸೃಷ್ಟಿಯ ಪ್ರಾಥಮಿಕ ಸ್ಥಿತಿಯನ್ನು ವೇದಾಂತ ಮತದಲ್ಲಿ ಅವ್ಯಕ್ತವೆಂದೂ ಅವ್ಯಾಕೃತವೆಂದೂ—ಸ್ಪಷ್ಟವಾಗದ್ದು,

ಗುರುತಿಸಲಾಗುವ ರೂಪವನ್ನು ಇನ್ನೂ ಪಡೆಯದುದ್ದು, ಎಂದು— ಕರೆಯುತ್ತಾರೆ. ಆ ಅವ್ಯಾಕೃತದಿಂದ ಪ್ರಪಂಚ ಹೊರಟಾಗ— ಎಂದರೆ ಪಂಚಮಹಾಭೂತಗಳು ಹುಟ್ಟಿಕೊಂಡಾಗ—ಸಾಮಾನ್ಯ ವಿಶೇಷಗಳೆರಡೂ ಉಂಟಾದವು. ಆ ಅವ್ಯಾಕೃತವೆಂಬುದು ಅನಂತವೂ ಅಪಾರವೂ ಆದ ಸರ್ವಮೂಲವಸ್ತು. ಅದರಿಂದ ಹುಟ್ಟಿದ್ದು ಸಾಂತ, ಸಪಾರ ಅಪರಿಮಿತವಾದದ್ದರಿಂದ ಪರಿಮಿತ ವಾದದ್ದು ಈಚೆಗೆ ಬಂದರೂ ಮೂಲದಲ್ಲಿ ಇನ್ನೂ ಮಿಕ್ಕಿರತಕ್ಕದ್ದು ಅಪರಿಮಿತವೇ. ಎಂದರೆ ಅವ್ಯಾಕೃತದ ಒಂದಂಶ—ಒಂದು ಪಾಲು—ಒಂದು ಚೂರುಮಾತ್ರ ವ್ಯಾಕೃತವಾಗುತ್ತದೆ. ಅವ್ಯಕ್ತ ವಾಗಿ ನಿಂತದ್ದೇ ಸಾಮಾನ್ಯ. ವ್ಯಕ್ತವಾದದ್ದೇ ವಿಶೇಷ. ಹಾಗೆ ವ್ಯಕ್ತವಾದದ್ದರ ಮಹಾರಾಶಿಯಲ್ಲಿ ಒಂದು ಭಾಗ ಪುನಃ ರೂಪಾಂತರವನ್ನು ತಾಳುತ್ತದೆ, ಮಿಕ್ಕದ್ದು ಹಾಗೆಯೇ ಇರುತ್ತದೆ. ಹಾಗೆ ಮಿಕ್ಕದ್ದೇ ಸಾಮಾನ್ಯ, ರೂಪಾಂತರ ವಾದದ್ದೇ ವಿಶೇಷ. ಹೀಗೆ ವ್ಯಾಕೃತದ ಅನ್ಯರೂಪಾವತಾರವು ಪರಂಪರೆಯಾಗಿ ನಿರಂತರವಾಗಿ ನಡೆಯುತ್ತಿರುತ್ತದೆ. ಅದೇ ಪ್ರಪಂಚ (ಯಾವಾಗಲೂ ವಿಸ್ತಾರವಾಗುತ್ತಿರುವುದು, ಎಂದೆಂದೂ ಹೊಸಹೊಸದಾಗಿ ಹರಡಿಕೊಳ್ಳುತ್ತಿರುವುದು). ಈ ವಿಪರಿಣಾಮಕ್ರಮ ಪರಂಪರೆಯಲ್ಲಿ ಜಗದ್ವಸ್ತುಗಳು ತೋರು ತ್ತಿರುವ ಸರ್ವಸಾಮಾನ್ಯ ಲಕ್ಷಣಗಳಿಗನುಸಾರವಾಗಿ ವಸ್ತು ಗಳಲ್ಲಿ ಗಣಗಳು, ಅಥವಾ ವರ್ಗಗಳು, ಅಥವಾ ಜಾತಿಗಳು ಏರ್ಪಡುತ್ತವೆ; ವಸ್ತುಗಳ ಪ್ರತ್ಯೇಕಗಳಾದ ವಿಶೇಷ ಲಕ್ಷಣ ಗಳು ವೈಶಿಷ್ಟ್ಯ, ವ್ಯಕ್ತಿತ್ವ, ವ್ಯಷ್ಟಿಗುಣ, ವೈಲಕ್ಷಣ್ಯ, ಸ್ವಾತ್ಮೀ ಯತೆ—ಎಂದನ್ನಿಸಿಕೊಳ್ಳುತ್ತವೆ. ಆ ಭೇದಗಳನ್ನನುಸರಿಸಿ ಕೊಂಡಿರುವಂಥವು ದೇಶಧರ್ಮ ಕುಲಧರ್ಮ ಗಣಧರ್ಮಗಳೆಂಬ ಧರ್ಮ ಪ್ರಭೇದಗಳು, ಅಥವಾ ವಿಶೇಷ ಧರ್ಮಗಳು.

ನಮ್ಮ ಸ್ಮೃತಿಕಾರರು ಧರ್ಮವನ್ನು ಸಾಮಾನ್ಯವೆಂದೂ ವಿಶೇಷವೆಂದೂ ಎರಡು ಪ್ರಕಾರವಾಗಿ ಪರಿಗಣಿಸಿದ್ದಾರೆ. ಸತ್ಯ, ನ್ಯಾಯ, ದಯೆ, ಶುಚಿ, ಆತ್ಮಸಂಯಮ, ಆಶಾಪರಿಮಿತಿ—ಇವು ಸಾಮಾನ್ಯಧರ್ಮಗಳು, ಎಲ್ಲ ಮನುಷ್ಯರಿಗೂ ಏಕಪ್ರಕಾರವಾಗಿ ಅನ್ವಯಿಸತಕ್ಕುವು ; ಆದರೆ ವೇದಾಧ್ಯಯನವು ಬ್ರಾಹ್ಮಣನ ವಿಶೇಷಧರ್ಮ, ಶಸ್ತ್ರಧಾರಣೆ ಕ್ಷತ್ರಿಯನ ವಿಶೇಷಧರ್ಮ, ಕೃಷಿ ವಾಣಿಜ್ಯಾದಿಗಳು ವೈಶ್ಯನ ವಿಶೇಷಧರ್ಮ—ಹೀಗೆ ನಾನಾ ಕುಲ ನಾನಾ ವೃತ್ತಿಗಳಿಗೂ ಅವರವರ ವಿಶೇಷಧರ್ಮಗಳು ಶಾಸ್ತ್ರ ವಾಕ್ಯದಿಂದಲೋ ಸಂಪ್ರದಾಯದಿಂದಲೋ ವಿಹಿತವಾಗಿ ಬಂದಿರುತ್ತವೆ. ಈ ಧರ್ಮವಿಶೇಷಗಳಿಂದ ಸಂಸ್ಕೃತಿ ವಿಶೇಷ ಗಳು ಹುಟ್ಟುತ್ತವೆ.

ಸಂಸ್ಕೃತಿಯೆಂಬುದೂ ದ್ವಿಪ್ರಕಾರವಾದದ್ದು. ಒಂದು ಪ್ರದೇಶದೊಳಗಡೆ, ಒಂದು ಭಾಷಾಸಮಾಜದೊಳಗಡೆ, ಒಂದು ಜಾತಿಯೊಳಗಡೆ, ಒಂದು ವರ್ಗದೊಳಗಡೆ ಉತ್ಪನ್ನವಾದದ್ದು ಸಂಸ್ಕೃತಿಯ ವಿಶೇಷಾಕಾರ. ಈ ವಿಶೇಷಗಳ ಸಂಸರ್ಗದಿಂದ ಅವುಗಳ ಸಾಧಾರಣಾಂಶಗಳು ಏಕೀಭವಿಸಿ ಆಗುವುದು ಸಂಸ್ಕೃತಿಯ ಸಾಮಾನ್ಯಾಕಾರ. ಪ್ರತಿಯೊಂದು ಸಂಸ್ಕೃತಿಯೂ ಒಂದು ಪಕ್ಕದಿಂದ ಸಾಮಾನ್ಯವಾಗಿಯೂ ಇನ್ನೊಂದು ಪಕ್ಕದಿಂದ ವಿಶೇಷವಾಗಿಯೂ ಕಾಣಬರುತ್ತದೆ.

ಸಾಮಾನ್ಯದಿಂದ ವಿಶೇಷ ; ವಿಶೇಷದಲ್ಲಿ ಸಾಮಾನ್ಯ ; ಮತ್ತೆ ಆ ಸಾಮಾನ್ಯದಿಂದ ವಿಶೇಷ; ಮತ್ತೆ ಆ ವಿಶೇಷದಲ್ಲಿ ಸಾಮಾನ್ಯ— ಈ ರೀತಿಯಾಗುತ್ತದೆ ವಿಶ್ವವಸ್ತುಗಳ ಲಕ್ಷಣಾವಿರ್ಭಾವ. ಕಣ್ಣು, ಕಿವಿ, ಮೂಗು, ಬಾಯಿ, ಕೈ, ಕಾಲು ಮೊದಲಾದ ಅಂಗಾಂಗಗಳು ಸ್ಥೂಲವಾಗಿ ಎಲ್ಲ ಮನುಷ್ಯರಿಗೂ ಉಂಟು. ಆದದ್ದರಿಂದ ಅಷ್ಟರ ಮಟ್ಟಿಗೆ ಸಕಲ ಮನುಷ್ಯರ ಲಕ್ಷಣ

ಸಾಮಾನ್ಯ; ಅದನ್ನನುಸರಿಸಿ ಸೃಷ್ಟಿಯಲ್ಲಿ ಮನುಷ್ಯ ಪ್ರಾಣಿಯದು ಒಂದು ವರ್ಗವೆಂದು ಗಣನೆ. ಆದರೆ ಒಬ್ಬ ಮನುಷ್ಯನ ಮುಖದಂತೆ ಮತ್ತೊಬ್ಬನದಿಲ್ಲ; ಒಬ್ಬನ ಮೂಗಿನಂತೆ ಇನ್ನೊಬ್ಬನದಿಲ್ಲ; ಒಬ್ಬನ ಕಂಠಧ್ವನಿಯಂತೆ ಮತ್ತೊಬ್ಬನದಿಲ್ಲ. ಇನ್ನು ಬುದ್ಧಿಶಕ್ತಿ ಮನೋವೃತ್ತಿಗಳನ್ನು ತೆಗೆದುಕೊಂಡು ನೋಡಿದರೆ ಯಾವ ಇಬ್ಬರಿಡೂ ಒಂದೇ ಮಟ್ಟದ್ದಾಗಿ ಒಂದೇ ವೇಗದ್ದಾಗಿ ಇರುವುದಿಲ್ಲ. ಬಾಹ್ಯರೂಪರೇಖೆಯಲ್ಲಿ ಹೇಗೋ ಅಂತರಂಗ ರಚನೆಯಲ್ಲಿಯೂ ಹಾಗೆ ಒಬ್ಬೊಬ್ಬ ಮನುಷ್ಯನೂ ಒಂದೊಂದು ಪ್ರತ್ಯೇಕ ಸೃಷ್ಟಿಯಾಗಿರುತ್ತಾನೆ. ಏಕದಾಂಪತ್ಯದಿಂದ ಜನಿಸಿದ ಐವರು ಮಕ್ಕಳದೂ ಐದು ಬೇರೆ ಬೇರೆ ಲಕ್ಷಣಗಳು. ಹೀಗೆ ವರ್ಗ ಏಕ; ವ್ಯಕ್ತಿ ಅನೇಕ. ಸಾಮಾನ್ಯಾಕಾರದಲ್ಲಿ ಮನುಷ್ಯರೆಲ್ಲ ಒಂದು; ವಿಶೇಷಾಕಾರದಲ್ಲಿ ಒಬ್ಬೊಬ್ಬ ಮನುಷ್ಯನೂ ಬೇರೆ ಬೇರೆ. ಇಂಥಾದ್ದು ಪ್ರಕೃತಿಯ ಏರ್ಪಾಟು. ಆ ಏರ್ಪಾಟಿನಿಂದ ಹುಟ್ಟಿದ್ದು ಒಂದು ಕಡೆ ವಂಶ, ವರ್ಗ, ಕುಲ, ಜಾತಿ, ಪೀಳಿಗೆ ಮೊದಲಾದ ಸಮೂಹಗಣನೆ; ಇನ್ನೊಂದು ಕಡೆ ಕೇವಲ ವ್ಯಕ್ತಿಗಣನೆ.

## ಪಂಚವಿಧ ಭೇದಗಳು

ವೇದಾಂತಿಗಳು ಭೇದಗಳನ್ನು ಸ್ಥೂಲವಾಗಿ ಮೂರು ಪ್ರಕಾರವೆಂದು ಭಾವಿಸುತ್ತಾರೆ:—

(೧) ವಿಜಾತೀಯ ಭೇದ—ಮರಕ್ಕೂ ಮಣ್ಣು ಕಲ್ಲು ಲೋಹ ಮೊದಲಾದ ಇತರ ಎಲ್ಲ ವಸ್ತುಗಳಿಗೂ ಇರುವ ಭೇದ.

(೨) ಸಜಾತೀಯ ಭೇದ—ಮರಗಳಲ್ಲಿ ಮಾವಿಗೂ ಬೇವು ತೆಂಗು ಹುಣಿಸೆ ಮೊದಲಾದವುಗಳಿಗೂ ಇರುವ ಭೇದ.

(೩) ಸ್ವಗತ ಭೇದ—ಇದರಲ್ಲಿ ಮೂರು ಪ್ರಭೇದಗಳು:

(i) ವ್ಯಷ್ಟಿ ಸಮಷ್ಟಿ ಭೇದ: ಒಂದು ಮಾವಿನ ಬಿಡಿ ಮರಕ್ಕೂ ಮಾವಿನ ತೋಪಿನ ಒಟ್ಟಿಗೂ ಭೇದ.

(ii) ವ್ಯಷ್ಟಿ ವ್ಯಷ್ಟಿ ಭೇದ: ಒಂದು ಮಾವಿನ ಗಿಡಕ್ಕೂ ಇನ್ನೊಂದು ಮಾವಿನ ಗಿಡಕ್ಕೂ ಭೇದ.

(iii) ವ್ಯಷ್ಟ್ಯವಯುವ ಭೇದ: ಒಂದೇ ಮಾವಿನ ಮರದೊಳಗೆ ಕಾಂಡದಿಂದ ಎಲೆಗೂ ಎಲೆಯಿಂದ ಹುವ್ವಿಗೂ ಹುವ್ವಿನಿಂದ ಕಾಯಿಗೂ ಇರುವ ಭೇದ.

ಹೀಗೆ ವಸ್ತುಗುಣ ಭೇದಗಳು ಪ್ರಕೃತಿ ಸಿದ್ಧವಾದವು. ಅವುಗಳ ಫಲಿತಾಂಶವು ಜನತೆಯ ನಾನಾತ್ವ,—ವಂಶಗಳು, ಕುಲಗಳು, ಜಾತಿಗಳು, ಪೀಳಿಗೆಗಳು, ಮನೆತನಗಳು, ಬಗೆಬಗೆಯ ತಂಡ ಗುಂಪುಗಳು.

ಒಬ್ಬ ಮನುಷ್ಯನು ಇತರರಿಂದ ಯಾವ ಯಾವ ವಿಷಯಗಳಲ್ಲಿ ಎಷ್ಟೆಷ್ಟು ಬೇರೆಯಾಗಿದ್ದಾನೋ ಅಷ್ಟಷ್ಟು ಮಾತ್ರ ಅವನ ವ್ಯಕ್ತಿತ್ವ.

ಹಾಗೆಯೇ ಒಂದು ಜನಸಂಘವು ಅಂಥ ಇತರ ಜನಸಂಘಗಳಿಂದ ಯಾವ ಯಾವ ವಿಷಯಗಳಲ್ಲಿ ಎಷ್ಟೆಷ್ಟು ಮಾತ್ರ ಬೇರೆಯಾಗಿರುತ್ತದೆಯೋ ಅಷ್ಟಷ್ಟು ಮಾತ್ರ ಅದೊಂದು ಪ್ರತ್ಯೇಕ ಜನಪದ, ಅಥವಾ ಜಾತಿ, ಅಥವಾ ಕುಲ, ಅಥವಾ ಕೋಮು.

ಕೃತಕವಲ್ಲದೆ ನೈಜವಾಗಿರುವ ಗುಣವೃತ್ತಿ ವಿಲಕ್ಷಣಗಳೇ ಈ ಕುಲ ವರ್ಗ ಜಾತಿಭೇದಗಳಿಗೆ ಕಾರಣ.

ಚಾತುರ್ವರ್ಣ್ಯಂ ಮಯಾ ಸೃಷ್ಟಂ
ಗುಣಕರ್ಮ ವಿಭಾಗಶಃ || —ಗೀತಾ

ಹೀಗೆ ಸಾಧಾರಣಲಕ್ಷಣ ವಿಶೇಷಲಕ್ಷಣಗಳೆರಡೂ ಇರುವ ಕಾರಣದಿಂದಲೇ ಮನುಷ್ಯನಿಗೆ ಜೀವಿತದಲ್ಲಿ ಒಂದು ಕುತೂಹಲ ಮತ್ತು ಬಲ. ಜನದಲ್ಲಿರುವ ಸಾಮಾನ್ಯಲಕ್ಷಣಗಳು ಅವರನ್ನು ಒಟ್ಟುಗೂಡಿಸಿ ಸಂಘವಾಗಿ ನಿಲ್ಲಿಸಿರುತ್ತವೆ; ವಿಶೇಷಲಕ್ಷಣಗಳು

ಅವರಲ್ಲಿ ಪರಸ್ಪರ ಆಕರ್ಷಣೆಯನ್ನುಂಟುಮಾಡುತ್ತವೆ. ಹೀಗೆ ಉಭಯತಃ ಜೀವನಕ್ಕೆ ಪ್ರೇರಣೆ.

ಭೇದವೆಂದರೆ ಒಂದಕ್ಕಿಂತ ಇನ್ನೊಂದು ಯಾವುದೋ ವಿಷಯದಲ್ಲಿ ಇಷ್ಟೋ ಅಷ್ಟೋ ಕಡಮೆ ಅಥವಾ ಹೆಚ್ಚು ಎಂದು.

ಮನುಷ್ಯರ ಗುಣಶಕ್ತಿಗಳಲ್ಲಿ ಇಂಥಾ ನ್ಯೂನಾಧಿಕ್ಯಗಳಿರುವ ಕಾರಣದಿಂದಲೇ ಅವರಿಗೆ ಅನ್ಯೋನ್ಯಾವಶ್ಯಕತೆ. ಅದರಿಂದಲೇ ಸಂಘ ಸಮಾಜಗಳು. ಒಬ್ಬ ಮನುಷ್ಯನ ಜೀವನಪರಿಪೂರ್ಣತೆಗೆ ಬೇಕಾದ ಗುಣಶಕ್ತಿ ಸಂಪತ್ತುಗಳೆಲ್ಲ ಅವನಲ್ಲಿಯೇ ಸಂಪೂರ್ಣವಾಗಿದ್ದಲ್ಲಿ ಅವನಿಗೆ ಇನ್ನೊಬ್ಬನ ಅಪೇಕ್ಷೆಯಿರದು; ಅಂಥವನಿಗೆ ಸಮಾಜವೂ ರಾಜ್ಯವೂ ಬೇಕಾಗದು. ಸಮಾಜ ರಾಜ್ಯಗಳ ಪ್ರಭಾವಕ್ಕೆ ಸಿಕ್ಕದವನ ಜೀವಕ್ಕೆ ಸಂಸ್ಕಾರಾವಕಾಶವೂ ವಿಕಾಸಾವಕಾಶವೂ ಇಲ್ಲದೆ ಹೋಗುತ್ತವೆ. ಹೀಗೆ ಮನುಷ್ಯರಲ್ಲಿ ಸ್ವಭಾವಗತವಾಗಿ ಬಂದಿರುವ ವರ್ಗವ್ಯತ್ಯಾಸ ಜಾತಿವ್ಯತ್ಯಾಸಗಳು ಸಮಾಜಘಟನೆಗೆ ಪ್ರೇರಕಗಳಾಗಿ ಜೀವನ ವಿಕಸನಕ್ಕೆ ಸಾಧಕಗಳಾಗಿರುತ್ತವೆ.*

ಹೀಗೆ ಭೇದಗಳೂ ವ್ಯತ್ಯಾಸಗಳೂ ನಮಗೆ ಉಪಕಾರಿಗಳೂ ಆಗಬಲ್ಲುವು. ಎಲ್ಲೆ ಮೀರಿದಾಗ ಮಾತ್ರ ಅವು ಅಪಕಾರಿಗಳಾಗುತ್ತವೆ. ಆ ಎಲ್ಲೆಯನ್ನರಿತುಕೊಳ್ಳುವುದೇ ಸಂಸ್ಕೃತಿಯ ಒಂದು ಗುರುತು. ಮರ್ಯಾದಾಪರಿಜ್ಞಾನವೇ ಸಂಸ್ಕೃತಿ.

ಒಂದೇ ಆಕಳಿನಿಂದ ಹಾಲು ಸಗಣಿ ಎರಡೂ ಹೊರಡುತ್ತವೆ. ಆಕಳ ಹೊಟ್ಟೆ ಸಾಮಾನ್ಯ, ಹಾಲು ಸಗಣಿ ವಿಶೇಷ. ಪುನಃ ಹಾಲು ಸಾಮಾನ್ಯ; ನೊರೆಹಾಲು, ಕೀರು, ಖೋವ, ಮೊಸರು, ಬೆಣ್ಣೆ, ಗಿಣ್ಣು, ತುಪ್ಪ, ಮಜ್ಜಿಗೆ—ಇವು ವಿಶೇಷ. ಒಂದೇ ಹಾಲಿನಿಂದ ಈ

* ಈ ಲೇಖಕನ "ರಾಜ್ಯಶಾಸ್ತ್ರ", ಪುಟ ೪೩ನ್ನು ನೋಡಿರಿ.

ಏಳೆಂಟು ಪದಾರ್ಥಗಳು ತಯಾರಾಗಿದ್ದರೂ ಒಂದೊಂದರ ರುಚಿ ಒಂದೊಂದು; ಒಂದೊಂದು ಮಾಡುವ ಕೆಲಸ ಒಂದೊಂದು. ಈ ಗುಣಕರ್ಮ ಪ್ರಭೇದಗಳಿಂದ ಸಾಧಿಸಲಾಗುವ ಉದ್ದೇಶಗಳನ್ನು ಭೇದರಹಿತವಾದ ಮೂಲಕ್ಷೀರದ ಏಕತ್ವದಿಂದ ಸಾಧಿಸಲಾಗುವುದಿಲ್ಲ. ಹಾಲು ಮಾಡಬಲ್ಲದ್ದನ್ನು ಸಗಣಿ ಮಾಡಲಾರದು. ಸಗಣಿ ಮಾಡಬಲ್ಲ ಉಪಕಾರವನ್ನು ಹಾಲೂ ಮಾಡಲಾರದು. ಲೋಕದಲ್ಲಿ ಒಂದೊಂದು ಗುಣಕ್ಕೂ ಒಂದೊಂದು ಕೆಲಸವಿದೆ. ಒಂದೊಂದು ವರ್ಗಕ್ಕೂ ಒಬ್ಬೊಬ್ಬ ವ್ಯಕ್ತಿಗೂ ಒಂದೊಂದು ಜಾಗವಿದೆ. ಆಯಾ ವರ್ಗದ ಆಯಾ ವ್ಯಕ್ತಿಯ ಗುಣಶಕ್ತಿಗಳಂತೆ ಅದರದರ ಜೀವಿತಧರ್ಮ. ಅವನವನ ಗುಣಸಂಪತ್ತಿನಂತೆ ಅವನವನ ಜೀವಿತ ಕರ್ತವ್ಯ. ಇದೇ ಗೀತೆಯ ಸ್ವಧರ್ಮಬೋಧನೆ:

ಸ್ವಧರ್ಮೇ ನಿಧನಂ ಶ್ರೇಯಃ
ಪರಧರ್ಮೋ ಭಯಾವಹಃ ||
ಶ್ರೇಯಾನ್ ಸ್ವಧರ್ಮೋ ವಿಗುಣಃ
ಪರಧರ್ಮಾತ್ ಸ್ವನುಷ್ಠಿತಾತ್ ||

[ತನ್ನ ಧರ್ಮದಲ್ಲಿ ತಾನು ಸಾಯಬೇಕಾಗಿ ಬಂದರೂ ಅದು ಒಳ್ಳೆಯದೇ; ಇನ್ನೊಬ್ಬರ ಧರ್ಮ ಅವರಿಗೆ ಅದೆಷ್ಟೇ ಒಳ್ಳೆಯದಾದರೂ ತನಗೆ ಅಪಾಯಕರವೇ. ಇನ್ನೊಬ್ಬನ ಧರ್ಮವನ್ನು ನೀನು ಎಷ್ಟು ಚೆನ್ನಾಗಿ ನಡಸುವೆನೆಂದರೂ ಅದಕ್ಕಿಂತಲೂ ಅಷ್ಟು ಶ್ರೇಷ್ಠವೆಂದು ತೋರದ ನಿನ್ನ ಧರ್ಮವನ್ನು ನೀನು ನಡಸುವುದೇ ಹೆಚ್ಚು ಶ್ರೇಯಸ್ಸು.]

ಸಂನ್ಯಾಸವೇನೋ ಧರ್ಮಗಳಲ್ಲೆಲ್ಲಾ ಸರ್ವಶ್ರೇಷ್ಠವಾದದ್ದೇ ಸರಿ. ಆದರೆ ಬಾಲ್ಯದಿಂದ ಶೂರ ವಾತಾವರಣದಲ್ಲಿ ಶಸ್ತ್ರವಿದ್ಯೆ ಕಲಿತು ಬೆಳೆದವನಿಗೆ ಯುದ್ಧರಂಗದಲ್ಲಿ ಸೇನೆಯೆದುರಿಸಿ ನಿಂತಾಗ ಸಂನ್ಯಾಸಕ್ಕಿಂತ ಶಸ್ತ್ರಸಂಧಾನವೇ ದೊಡ್ಡ ಧರ್ಮ.

ಮನುಷ್ಯನ ಒಳಸಾಮರ್ಥ್ಯ, ಹೊರಸಂದರ್ಭ—ಇವೆರಡೂ ಸೇರಿ ಅವನ ಧರ್ಮವನ್ನು ನಿಷ್ಕರ್ಷೆಮಾಡುತ್ತವೆ. ಒಂದು ಜಾತಿಗೂ ಅಷ್ಟೆ, ವರ್ಗಕ್ಕೂ ಅಷ್ಟೆ, ಜನಪದಕ್ಕೂ ಅಷ್ಟೆ. ಆದರದರ ವಿಶೇಷ ಗುಣ, ವಿಶೇಷ ಶಕ್ತಿ, ವಿಶೇಷ ಸಂಪತ್ತುಗಳನ್ನು ಅದದು ಲೋಕಪ್ರಯೋಜನೈಕದೃಷ್ಟಿಯಿಂದ ಅಭಿವೃದ್ಧಿ ಪಡಿಸಿ ಕೊಂಡು ನಡೆಯುತ್ತಿರಬೇಕಾದದ್ದು ಧರ್ಮ. ಲೋಕಜೀವನಕ್ಕೆ ಬೇಕಾದದ್ದು ಏಕೈಕ ಗುಣತೆಯಲ್ಲ; ಅನೇಕ ಗುಣಸಂಕ್ಷೋಭೆಯೂ ಅಲ್ಲ; ಅದು ವಿವಿಧ ಗುಣಸಾಮರಸ್ಯ. ಜಾತಿಗಳ ಸಾಂಕರ್ಯವಲ್ಲ; ಜಾತಿಗಳ ಸ್ವತ್ವಪೂರ್ವಕವಾದ ಅನ್ಯೋನ್ಯ ಸ್ನೇಹ. ಮಲ್ಲಿಗೆ ಒಳ್ಳೆ ಮಲ್ಲಿಗೆಯಾಗಿ, ಸಂಪಗೆ ಒಳ್ಳೆ ಸಂಪಗೆ ಯಾಗಿ, ಗುಲಾಬಿ ಒಳ್ಳೆ ಗುಲಾಬಿಯಾಗಿ, ಪಾದರಿ ಒಳ್ಳೆ ಪಾದರಿ ಯಾಗಿ—ಅವೆಲ್ಲ ಒಂದು ಪರಿಮಾಣದಲ್ಲಿ, ಒಂದು ವರ್ಣ ಮೈತ್ರಿಯಲ್ಲಿ, ಒಂದು ರೇಖಾಕ್ರಮದಲ್ಲಿ ಜೋಡಿಸಿದ್ದರೆ ಅದು ತುರಾಯಿಯ ಸೊಗಸು. ಅದೇ ನಾನಾ ಜನಾಂಗ ನಾನಾ ಜಾತಿ ನಾನಾ ವರ್ಗ ನಾನಾ ಪೀಳಿಗೆಗಳ ಪರಸ್ಪರ ನೀತಿಯ ಸೂತ್ರ. ಆ ನಾನಾ ಜನಗಣಗಳ ನಾನಾ ವಿಶೇಷ ಸಂಸ್ಕಾರಗಳ ಪರಸ್ಪರ ವಿಪರಿಣಾಮಗಳ ಫಲಿತಾರ್ಥವೇ ಒಂದು ಮಹಾ ಸಂಸ್ಕೃತಿ. ಅದು ಹಿತಕರವಾಗಲು ಇರಬೇಕಾದದ್ದು ಔಚಿತ್ಯ ವಿವೇಕ,—ಜಾಗರೂಕವಾದ ಔಚಿತ್ಯವಿವೇಕ.

ಸಂಸ್ಕೃತಿವಂತನು ವ್ಯಕ್ತಿವೈಶಿಷ್ಟ್ಯವನ್ನು ಒಂದು ಪವಿತ್ರ ವಸ್ತುವೆಂದು ಭಾವಿಸಿ ಗೌರವಿಸುತ್ತಾನೆ. ಅವನು ಇತರರನ್ನು ತನ್ನ ವ್ಯಕ್ತಿತ್ವದ ಅಚ್ಚಿನಲ್ಲಿ ಎರಕ ಹೊಯ್ದು, ತನ್ನಂತೆ ಮಾಡಿ ಕೊಳ್ಳಯತ್ನಿಸುವುದಿಲ್ಲ. "ಜೀವಕ್ಕೂ ಜೀವಕ್ಕೂ ಭೇದವುಂಟು; ಆಯಾ ಜೀವ ಅದರದರ ಋತದ ಕಟ್ಟಳೆಯಂತೆ,—ಅದರದರ ನೈಜದಂತೆ,—ಬೆಳೆದುಕೊಳ್ಳಲಿ; ಒಂದರಂತೆ ಇನ್ನೊಂದಾಗಬೇಕಾದ

ದ್ದಿಲ್ಲ. ಪೌನಃಪುನ್ಯವು ಪ್ರಕೃತಿಯ ಉದ್ದೇಶವಿರಲಾರದು ; ಮಾಡಿದ್ದನ್ನೇ ಮತ್ತೆ ಮಾಡುತ್ತಿರಲು ಆಕೆಗೇನೂ ಚಮತ್ಕಾರದ ಬಡತನವಿಲ್ಲ. ವೈವಿಧ್ಯವೇ ಸೃಷ್ಟಿಯ ನಿತ್ಯಲಕ್ಷಣ. ಅವರವರ ಜೀವಿತಧರ್ಮ ಅವರವರದು ''—ಹೀಗೆಂಬುದು ಅವನ ನಂಬಿಕೆ. ಆದದ್ದರಿಂದ ಅವನು ತನ್ನ ರೀತಿಗಿಂತ ಬೇರೆ ರೀತಿ ಬಾಳುವವರಲ್ಲಿ ಸಹನೆ ಸಹಾನುಭೂತಿಗಳುಳ್ಳವನಾಗಿರುತ್ತಾನೆ. ತಾನೊಬ್ಬನೇ ಸರಿ, ತಾನೇ ಎಲ್ಲರಿಗೂ ಆದರ್ಶ ಎಂಬ ಭಾವನೆ ಅವನಲ್ಲಿ ತಲೆದೋರದು.

ಅನ್ಯಸಮಾಜ ಅನ್ಯಸಂಸ್ಕೃತಿಗಳ ವಿಷಯದಲ್ಲಿಯೂ ಹಾಗೆಯೇ ಅವನು ದ್ವೇಷಕ್ಕೆಡೆಕೊಡದೆ ಸಹನೆಸಖ್ಯಗಳನ್ನೇ ಬೆಳಸುತ್ತಾನೆ. ಹೀಗೆ ದೇಶೀಯಸಂಸ್ಕೃತಿ, ಪ್ರಾಂತಸಂಸ್ಕೃತಿ, ಭಾಷಾಸಂಸ್ಕೃತಿ, ಮತಾಚಾರಸಂಸ್ಕೃತಿ, ಕುಲಸಂಪ್ರದಾಯ ಸಂಸ್ಕೃತಿ ಮುಂತಾಗಿ ಸಾಮುದಾಯಿಕ ಸಂಸ್ಕೃತಿಗಳು ನಾಲ್ಕೆಂಟು ತೆರದುವಾಗಿದ್ದರೂ, ಅವನು ಅವುಗಳಲ್ಲಿ ಪರಸ್ಪರ ಪರಿಪೂರಕಗಳೂ ಸಹಕಾರಿಗಳೂ ಆದ ಅಂಶಗಳನ್ನು ಹುಡುಕಿ ತನ್ನ ಜೀವನದ ಮುಖ್ಯ ಸಂಸ್ಕೃತಿಯ ಜೊತೆಗೆ ಅವುಗಳನ್ನು ಹದವರಿತು ಸೇರಿಸಿಕೊಳ್ಳಲು ಪ್ರಯತ್ನಿಸುತ್ತಾನೆ.

---

## ಸಂಸ್ಕೃತಿಗಾಗಿ ಸ್ವಾತಂತ್ರ್ಯ

ಸಂಸ್ಕೃತಿಯು ಲೋಕಸಂಪರ್ಕದಿಂದ ಉಂಟಾಗತಕ್ಕದ್ದು ; ಲೋಕಜೀವನಕ್ಕೆ ಬೇಕಾದದ್ದು ; ಆದರೂ ಅದರ ಮೂಲ ವಸ್ತುವು ವ್ಯಕ್ತಿ.

ಸಂಸ್ಕೃತಿಯನ್ನು ಒಂದು ದೊಡ್ಡ ತೋಪಿಗೆ ಅಥವಾ ತೋಟಕ್ಕೆ, ಹೋಲಿಸಬಹುದು. ತೋಟದಲ್ಲಿ ಹತ್ತಾರು ಜಾತಿಯ

ಮರಗಳೂ ಗಿಡಗಳೂ ಬಳ್ಳಿಗಳೂ ಪೊದೆಗಳೂ ನೂರಾರು ಇರುತ್ತವೆ. ಆ ಬಗೆಬಗೆಯ ಸಸ್ಯಗಳಲ್ಲಿ ಒಂದರ ಗಾಳಿ ಇನ್ನೊಂದಕ್ಕೆ ಬೀಸುತ್ತದೆ; ಒಂದರ ನೆರಳು ಇನ್ನೊಂದರ ಮೇಲೆ ಬೀಳುತ್ತದೆ; ಒಂದರ ಬೇರು ಇನ್ನೊಂದಕ್ಕೆ ತಾಕುತ್ತದೆ; ಹೀಗೆ ಒಂದರ ಬೆಳವಣಿಗೆಯನ್ನು ಇನ್ನೊಂದು ಅಷ್ಟೋ ಇಷ್ಟೋ ಮಾರ್ಪಡಿಸುತ್ತದೆ. ಇಷ್ಟೆಲ್ಲ ನೆರೆಹೊರೆಯ ಸೋಕುಸೂಕುಗಳಿದ್ದರೂ ಒಂದೊಂದು ಸಸ್ಯದ ಜೀವನವೂ ಅದರದರದೇ ಬೇರೆಬೇರೆಯಾಗಿರುತ್ತದೆ. ಹುಲ್ಲು ಮಲ್ಲಿಗೆಯಾಗುವುದಿಲ್ಲ; ಬೇವು ಮಾವಾಗುವುದಿಲ್ಲ; ಹುಣಿಸೆ ಹಲಸಾಗುವುದಿಲ್ಲ. ಗಿಡದ ಎತ್ತರ ಕುಳ್ಳುಗಳನ್ನು, ಅದರ ಕೊಂಬೆ ರೆಂಬೆಗಳ ಹರವನ್ನು, ಅದರ ದಪ್ಪ ತೆಳುವುಗಳನ್ನು—ಅದರ ಸುತ್ತಮುತ್ತಣ ಸಂದರ್ಭಗಳು ಗೊತ್ತುಮಾಡುತ್ತವೆ. ಆದರೆ ಅದರ ಹೂವಿನ ವಾಸನೆಯೂ ಅದರ ಹಣ್ಣಿನ ರುಚಿಯೂ ಅದರ ನೆರೆಹೊರೆಯಿಂದ ಪೂರ್ತಿಯಾಗಿ—ಗುರುತು ಸಿಕ್ಕದಷ್ಟು ಮಟ್ಟಿಗೆ—ಬದಲಾಯಿಸುವುದಿಲ್ಲ. ಆ ವಾಸನೆಯೇ, ಆ ರುಚಿಯೇ, ವ್ಯಕ್ತಿಗುಣ. ಈ ವ್ಯಕ್ತಿಗುಣಾಂಶಗಳ ಒಟ್ಟೇ ತೋಟದ ಸೊಗಸು. ಮನುಷ್ಯಸಂಸ್ಕೃತಿಯಲ್ಲೂ ಹೀಗೆಯೇ—ಅತ್ಯಂತ ಬೆಲೆಯುಳ್ಳ ಅಂಶವು ವ್ಯಕ್ತಿಗುಣ. ಆ ವ್ಯಕ್ತಿಸಂಸ್ಕೃತಿ ಅಭಿವೃದ್ಧಿಯಾದಷ್ಟೂ ಸಮಸ್ತಜನ ಸಂಸ್ಕೃತಿಗೆ ಭಾಗ್ಯಾಭಿವೃದ್ಧಿ.

ಲೋಕಕ್ಕೆ ತಾನು ನೀಡುವ ಫಲಪುಷ್ಪಗಳಲ್ಲಿ ಹೇಗೋ ಲೋಕದಿಂದ ತಾನು ತೆಗೆದುಕೊಳ್ಳುವ ಆಹಾರದಲ್ಲಿಯೂ ಹಾಗೆ ಸಸ್ಯವು ತನ್ನ ಸಹಜಧರ್ಮವನ್ನು ಬಿಡಲಾರದು. ನೆಲದಿಂದಲೂ ನೀರಿನಿಂದಲೂ ಗಾಳಿಯಿಂದಲೂ ಬಿಸಿಲಿನಿಂದಲೂ ಮರವು ತನಗೆ ಬೇಕಾದ ಅಂಶಗಳನ್ನು ಆರಿಸಿ ಹೀರಿಕೊಳ್ಳುತ್ತದೆ; ಬೇಡದ್ದನ್ನು ಬಿಡುತ್ತದೆ. ಕಬ್ಬಿಗೆ ಬೇಕಾದದ್ದೆಲ್ಲ ಕಡಲೆಗೆ ಬೇಕಿಲ್ಲ;

ತೊಗರಿಗೆ ಸಾಕಾದದ್ದು ತೆಂಗಿಗೆ ಸಾಲದು. ಹೀಗೆ ಒಂದೊಂದರ ವ್ಯಕ್ತಿಧರ್ಮ ಒಂದೊಂದು.

ಒಳ್ಳೆಯ ತೋಟಗಾರನು ಈ ವ್ಯಕ್ತಿಲಕ್ಷಣಗಳನ್ನರಿತವನು. ಅವನು ಮೊದಲು ತನ್ನ ತೋಟದ ಮರ ಗಿಡ ಬಳ್ಳಿಗಳ ಬೆಲೆಗಳನ್ನು ಮನಸ್ಸಿಗೆ ಗೊತ್ತುಮಾಡಿಕೊಂಡಿರುತ್ತಾನೆ. ಬಳಿಕ ಆ ಬೆಲೆಗಳ ಹೆಚ್ಚುಕಡಮೆಗಳನ್ನೆಣಿಸಿ ತನ್ನ ಗಮನವನ್ನು ಹಂಚುತ್ತಾನೆ. ಹತ್ತು ಬೆಲೆಬಾಳುವ ಗಿಡಕ್ಕೆ ಐದು ಬೆಲೆಬಾಳುವ ಗಿಡದಿಂದ ಅಡ್ಡಿಯಾಗುವ ಹಾಗಿದ್ದರೆ ಈ ಕಡಮೆ ಬೆಲೆಯದನ್ನು ಬೇರೊಂದೆಡೆಗೆ ಸಾಗಿಸುತ್ತಾನೆ. ಹೀಗೆ ತಾರತಮ್ಯವರಿತು ಅವನು ಒಳ್ಳೊಳ್ಳೆಯ ಸಸ್ಯಗಳಿಗೆ ಬೆಳೆಯುವ ಅವಕಾಶವನ್ನು ಹೆಚ್ಚಿಸುತ್ತಾನೆ. ಗಿಡ ಒತ್ತಾಗಿರುವ ಕಡೆ ಬಿಡುಮಾಡಿಸುತ್ತಾನೆ. ಕಳೆ ಕಸವನ್ನು ಕಿತ್ತು ಹೊರಕ್ಕೆ ಸಾಗಿಸುತ್ತಾನೆ. ನೀರು ನಿಲ್ಲುವಂತೆ ಪಾತಿ ಮಾಡುತ್ತಾನೆ. ಆಗಾಗ ಅಗತೆ ಮಾಡಿ ಬೇರಿಗೆ ಸ್ವಾತಂತ್ರ್ಯ ದೊರಕಿಸುತ್ತಾನೆ. ಇವೆಲ್ಲ ವ್ಯಕ್ತಿಪೋಷಕಕ್ರಿಯೆಗಳು. ಹತ್ತು ಒಳ್ಳೆಯ ಗಿಡದಿಂದ ತೋಟ; ನೂರು ಕುರುಚಲು ಕಳೆಯಿಂದಲ್ಲ.

ಒಂದು ಜನಾಂಗದ ಅಥವಾ ಒಂದು ಸಮಾಜದ ಸಂಸ್ಕೃತಿಗೆ ಬೆಲೆ ಹೆಚ್ಚಬೇಕಾದರೆ ಅದರ ವ್ಯಕ್ತಿಗಳು ತಂತಮ್ಮ ಆತ್ಮವ್ಯವಸಾಯಕ್ಕೆ ಯಥೇಷ್ಟವಾಗಿ ಅವಕಾಶ ಪಡೆದಿರಬೇಕು. ಮನುಷ್ಯನ ಸ್ವಾಭಿವ್ಯಕ್ತಿಗಿರುವ ಈ ವಿಶಾಲಾವಕಾಶವೇ ನಿಜವಾದ ಮತ್ತು ನ್ಯಾಯವಾದ ಸ್ವಾತಂತ್ರ್ಯ. ಗಿಡದಲ್ಲಿ ಹೂ ಚೆನ್ನಾಗಿ ಬರಬೇಕಾದರೆ ಅದು ಬಿಸಿಲಕಡೆ ತಲೆ ತಿರುಗಿಸುವುದಕ್ಕೂ ತೆರಪಿರುವ ಕಡೆ ಕೊಂಬೆ ಚಾಚುವುದಕ್ಕೂ ತನಗೆ ಬೇಕಾದ ಭೂಸಾರವನ್ನು ಹೀರುವುದಕ್ಕೂ ಸ್ವತಂತ್ರವಾಗಿರಬೇಕು. ಅದಕ್ಕೆ ಕೊಟ್ಟ ಸ್ವಾತಂತ್ರ್ಯವು ಅದು ಬಿಡುವ ಹೂ ಹಣ್ಣುಗಳಿಂದ ಸಾರ್ಥಕ

ವಾಗುತ್ತದೆ. ಮಾನವ ಸಂಸ್ಕೃತಿಯ ಅಭಿವೃದ್ಧಿ ಸಫಲತೆಗಳ ವಿಷಯವೂ ಅದರಂತೆಯೇ.

---

# ಸನ್ನಿವೇಶದ ಅನುಕೂಲತೆ

ಸಂಸ್ಕೃತಿಯ ಬೆಳೆವಣಿಗೆಗೆ ಅವಶ್ಯವಾದ ಅವಕಾಶಗಳೂ ಅನುಕೂಲತೆಗಳೂ ಕೆಲವಿರುತ್ತವೆ. ಮೊದಲು ಮನುಷ್ಯನ ಮನಸ್ಸಿಗೆ ನೆಮ್ಮದಿಯಿರಬೇಕು. ಆ ನೆಮ್ಮದಿ ಅವನ ಬಾಹ್ಯ ಸಂದರ್ಭಗಳ ಸುವ್ಯವಸ್ಥೆಯಿಂದ ಬರತಕ್ಕದ್ದು. ತನ್ನ ಬದುಕಿಗೆ ಬೇಕಾದ ಊಟ, ತನ್ನ ಮನೆ, ತನ್ನ ಉದ್ಯೋಗ, ತನ್ನ ಸಂಪಾದನೆ—ಈ ವಿಷಯಗಳಲ್ಲಿ ತಾನು ಮಾಡಿಕೊಂಡ ಏರ್ಪಾಟು ಹಾಗೆಯೇ ನಡೆದುಕೊಂಡು ಬಂದೀತೆಂಬ ನಂಬಿಕೆ ಅವನಿಗಿರಬೇಕು. ಅದು ಯಾವಾಗಲಾದರೂ ಯಾವ ಕಾರಣದಿಂದಲಾದರೂ ತಪ್ಪಿಹೋದೀತೇನೋ ಎಂಬ ಶಂಕೆ ಅವನ ಮನಸ್ಸಿನಲ್ಲಿ ಸಂತತವಾಗಿರಬಾರದು. ತನ್ನ ಜೀವಿಕೆಯ ವಿಷಯದಲ್ಲಿ ಖಾತರಿ ಇರಬೇಕಾದದ್ದು ಮನಸ್ಸಮಾಧಾನಕ್ಕೆ ಮೂಲ.

ಆಮೇಲೆ ತನ್ನ ಪ್ರಯತ್ನದೊಳಕ್ಕೆ ಇತರರು ಯಾರಾದರೂ ಕೈದೂರಿಸಿಯಾರೇನೋ ಎಂಬ ಭೀತಿ ಅವನಿಗಿರಬಾರದು. ಅವನು ಹಿಡಿದ ಕೆಲಸ ತನ್ನ ಮನಸ್ಸಿಗೆ ಪ್ರೇರಣೆಯಾದಂತೆ, ತನ್ನ ಬುದ್ಧಿಗೆ ತೋರಿದಂತೆ, ನಡೆಯಲಾಗುತ್ತದೆ;—ತಾನೇ ತನ್ನ ಸಂಕಲ್ಪಕ್ಕೆ ಸರ್ವಾಧಿಕಾರಿ—ಎಂಬ ಖಾತರಿ ಅವನಿಗಿರಬೇಕು.

ಮೂರನೆಯದಾಗಿ, ಅವನಿಗೆ ಪುರಸತ್ತಿರಬೇಕು. ಅನ್ನ ಸಂಪಾದನೆಯ ದುಡಿತವೂ ಉತ್ಸಾಹವನ್ನು ಕುಗ್ಗಿಸುವ ಚಿಂತೆಗಳೂ ಅತಿಯಾದರೆ ಮನಸ್ಸಿನ ಹದ ಕೆಡುತ್ತದೆ. ಬಿಡುವಿಲ್ಲದ ಮನಸ್ಸು ಅಂಗಳ ಬಯಲಿಲ್ಲದ ಮನೆಯಂತೆ; ಬೆಳೆತೆಗೆದ

ಮೂರಣೆಯ ದಿನವೇ ಬಿತ್ತನೆಯಾದ ಗದ್ದೆಯಂತೆ. ಅಭಿವೃದ್ಧಿಗೆ ವಿರಾಮ ವಿಶ್ರಾಂತಿಗಳೂ ಅವಶ್ಯವಾದ ಪೂರ್ವಸಿದ್ಧತೆಯೆಂಬು ದನ್ನು ನಾವು ಮರೆಯಬಾರದು.

ನಾಲ್ಕನೆಯದಾಗಿ, ಅವನ ಸುತ್ತಮುತ್ತಣ ಸಮಾಜದಲ್ಲಿ ಉತ್ತಮತಾನ್ವೇಷಣೆಗೆ ಪ್ರೇರಣೆ ಇರಬೇಕು. ಎಂಥ ಪ್ರತಿಭಾ ಶಾಲಿಯೂ ಎಂಥ ಪಂಡಿತನೂ ತನ್ನ ವಾತಾವರಣಕ್ಕಿಂತ ಬಹುದೂರ ಮೇಲ್ಪಟ್ಟಿರುವುದು ಸಾಧ್ಯವಲ್ಲ. ಪರಿಸರದ ಪ್ರಭಾವ ವನ್ನು ಯಾವ ಮನುಷ್ಯನೂ ತಪ್ಪಿಸಿಕೊಳ್ಳಲಾರ. ಜನತಾವರಣ ದಲ್ಲಿ ಒಂದು ಉತ್ಕೃಷ್ಟತಾಕಾಂಕ್ಷೆ ತುಂಬಿದ್ದಷ್ಟೂ ಸಂಸ್ಕೃತಿಗೆ ಉತ್ತೇಜನ ಹೆಚ್ಚಾಗಿರುತ್ತದೆ. ಪರಿಸರಾವರಣದಲ್ಲಿ ಪ್ರಗತಿ ಪ್ರೇರಣೆಯಿಲ್ಲದೆ ಹೋದಲ್ಲಿ ಸಂಸ್ಕೃತಿಗಾಗಿ ಪಡುವ ಶ್ರಮವು ಮರುಭೂಮಿಯಲ್ಲಿ ತೋಡಿದ ಬಾವಿಯಾದೀತು. ಹೀಗೆ ಸಮೃದ್ಧಿ, ನಿರುಪಾಧಿಕತೆ, ಕಾಲವ್ಯವಧಾನ, ಪ್ರಗತಿಕಾಂಕ್ಷೆ—ಇವು ಸಂಸ್ಕೃತಿಯ ಅಭಿವೃದ್ಧಿಗೆ ಬೇಕಾದ ಪೂರ್ವಸಿದ್ಧತೆಗಳು.

ನಮ್ಮ ದೇಶದಲ್ಲಿ ಮಹಾಕಾವ್ಯಗಳೂ ಕಲಾಕೃತಿಗಳೂ ಹುಟ್ಟಿದ ಕಾಲದಲ್ಲಿ ಸಮಾಜಸನ್ನಿವೇಶವು ಆ ಲಕ್ಷಣಗಳನ್ನು ಪಡೆದಿತ್ತು. ಕಾಳಿದಾಸನೂ ಜಯದೇವನೂ ಜಕ್ಕಣನೂ ಸಾಯಣನೂ ಪುರಂದರನೂ ತ್ಯಾಗರಾಜನೂ ತಮ್ಮ ತಮ್ಮ ಅಂತಃಕರಣ ಕೃಷಿಯಲ್ಲಿ ಸ್ವದೇಶದ ರಾಜಪಿಡ್ಡೂರಗಳಿಂದಲಾಗಲಿ ಶತ್ರುರಾಜ್ಯದ ಧಾಳಿಗಳಿಂದಲಾಗಲಿ ಸಮಾಜವ್ಯವಸ್ಥೆಯ ವಿಪರ್ಯಾಸದಿಂದಲಾಗಲಿ ವಿಘ್ನ ಕಂಡವರಂತೆ ತೋರುವುದಿಲ್ಲ. ಈಗ್ಗೆ ಐವತ್ತು ವರ್ಷಗಳ ಹಿಂದಿನ ವರೆಗೂ ನಮ್ಮ ದೇಶದಲ್ಲಿ ಕೇವಲ ಕುಗ್ರಾಮಗಳನ್ನು ಬಿಟ್ಟರೆ ಊರೂರಿನಲ್ಲಿಯೂ ವಿದ್ವಾಂಸರೂ ಕಲಾಭ್ಯಾಸಿಗಳೂ ಒಬ್ಬರಿಬ್ಬರಾದರೂ ಇರು ತ್ತಿದ್ದರು. ಅವರ ಸಂಗೀತ ಸಾಹಿತ್ಯಾಭ್ಯಾಸಗಳಿಗೆ ರಾಜಕೀಯ

ಕ್ರಾಂತಿಯ ಕೂಗಾಟ ಹಾರಾಟಗಳಾಗಲಿ, ಸೊತ್ತುವಿಭಾಗ ಶಾಸನದ ಮಾರ್ಪಾಟಿನ ಚಿಂತೆಯಾಗಲಿ, ಜಾತಿಮಾತ್ಸರ್ಯದ ಗೊಂದಲವಾಗಲಿ—ಪ್ರತ್ಯಕ್ಷವಾಗಿಯಾಗಲಿ ಪರಂಪರಾಸರಣಿಯಲ್ಲಿಯಾಗಲಿ—ಅಡಚಣೆಯೊಡ್ಡಿರಲಿಲ್ಲ. ತಮತಮಗಿದ್ದ ಅಷ್ಟಿಷ್ಟು ಜಮೀನಿನ ಉತ್ಪತ್ತಿಯಿಂದಲೂ ತಮ್ಮ ಕುಲವೃತ್ತಿಯ ವರಮಾನದಿಂದಲೂ ಅವರು ತೃಪ್ತರಾಗಿದ್ದುಕೊಂಡು, ಮಿಕ್ಕಂತೆ ಕಾವ್ಯ ವಾಚನಕ್ಕೋ ಪುರಾಣಕ್ಕೋ ಹರಿಕಥೆಗೋ ದೇವರ ನಾಮಕ್ಕೋ ಕಾಲವಿಸಿಯೋಗಮಾಡುತ್ತಿದ್ದರು. ಆ ನೆಮ್ಮದಿಯ ಪರಿಣಾಮ ಅವರ ನಡೆನುಡಿಗಳ ಸೌಜನ್ಯಮರ್ಯಾದೆಗಳಲ್ಲಿ ಕಾಣಬರುತ್ತಿತ್ತು. ಅದು ಸಂಸ್ಕೃತಿಯ ತಿರುಳು.

---

## ಸಂಸ್ಕೃತಿ ಮತ್ತು ಸರಕಾರ

ನಮದು ಸ್ವರ್ಗಸ್ವಪ್ನಗಳ ಕಾಲ. ನಮ್ಮ ಸಂಕಲ್ಪ ಸರ್ವೋದ್ಧಾರ. ನಮ್ಮ ದೀಕ್ಷೆ ಸರ್ವಸಮತೆ. ನಮ್ಮ ಧರ್ಮೋಪಾಯ ಪರಸ್ಪರ ನಿರ್ಬಂಧ. ಸಾರ್ವಜನಿಕಹಿತದ ಹೆಸರಿನಲ್ಲಿ ಎಲ್ಲರೂ ಎಲ್ಲರ ಮೇಲೂ ಒತ್ತಾಯ ಹಾಕುತ್ತಿರಬೇಕು. ಯಾರೂ ಯಾರನ್ನೂ ಸುಮ್ಮನಿರಗೊಡಿಸಬಾರದು. ಯಾರೂ ತನ್ನ ಪಾಡಿಗೆ ತಾನಿರಲು ಅವಕಾಶವಿರಬಾರದು. ಸರಕಾರವನ್ನು ಜನ ನೆಮ್ಮದಿಯಲ್ಲಿ ಬಿಡಬಾರದು; ಸರಕಾರ ಯಾರನ್ನೂ ನೆಮ್ಮದಿಯಲ್ಲಿ ಬಿಡಬಾರದು. ಏನು ತಿನ್ನಬೇಕು, ಎಷ್ಟು ತಿನ್ನಬೇಕು; ಏನು ತೊಡಬೇಕು, ಎಷ್ಟು ತೊಡಬೇಕು; ಏನು ಹಾಡಬೇಕು, ಏನು ಕೇಳಬೇಕು; ಏನು ಕಲಿಯಬೇಕು, ಏನು ಆಡಬೇಕು—ಇದಕ್ಕೆಲ್ಲ ಸರಕಾರವೋ ಸಮಾಜಾಭಿಪ್ರಾಯವೋ ವಿಧಾಯಕವಾಗಿರುತ್ತದೆ ಈ ನಮ್ಮ ಹೊಸ ವ್ಯವಸ್ಥೆಯಲ್ಲಿ. ವ್ಯಕ್ತಿ ಈಗ ಸಮಾಜ

ಭೂತದ ಪಾದುಕೆ ಮಾತ್ರ. ಯಾವುದು ನಾಲಿಗೆಯಲ್ಲಿ ನೀರೂರಿ ಸುತ್ತದೆಯೋ ಅದು ನಮ್ಮ ಪಾಲಿಗೆ ಒಳ್ಳೆಯದು. ನಮ್ಮ ಕರ್ಮಯೋಗ ಹಿಂದು ಮುಂದು ನೋಡದ, ಎಡೆಬಿಡದ, ಹಾರಾಟ. ಐಹಿಕಾನುಭವವೇ ನಮಗೆ ಮುಖ್ಯಪ್ರಮಾಣ. ಇಂದ್ರಿಯೋದ್ದೀಪನವೇ ಪರಮಸೌಖ್ಯ. ಇಂಥಾದ್ದು ನಮ್ಮ ಇಂದಿನ ಪ್ರಗತಿಭಾವನೆ. ಇದು ನಮ್ಮ ರಾಷ್ಟ್ರದ ಮುಖ್ಯನಾಯಕರ ಪ್ರತಿಜ್ಞೆ. ಇದರಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಸ್ಥಳವೆಲ್ಲಿ? ಸಂಸ್ಕೃತಿಗೆ ಬೆಲೆಯೆಲ್ಲಿ?

ನಿಜವಾದ ಸಂಸ್ಕೃತಿಗೆ ಭೌತಸಂಪತ್ತಿನ ಪ್ರಗತಿಗಿಂತ ಆತ್ಮಸಂಪತ್ತಿನ ಪ್ರಗತಿ ಹೆಚ್ಚಾದದ್ದು. ಅದು ಬಯಸುವುದು ಇಂದ್ರಿಯ ಲಾಲನೆಯನ್ನಲ್ಲ, ಅಂತರಂಗಶೋಧನೆಯನ್ನು. ಅದರ ಮುಖ್ಯ ಲಕ್ಷ್ಯ ಸಮಾಜವಲ್ಲ, ವ್ಯಕ್ತಿ. ಅದರ ದಾರಿ ತಾರತಮ್ಯ ವಿಸ್ಮೃತಿಯಲ್ಲ, ತಾರತಮ್ಯ ವಿವೇಕ. ಅದು ಸ್ವಾತಂತ್ರ್ಯ, ಸಮಾನತೆ, ಅಭೇದತೆ ಮೊದಲಾದ ಹೊಸ ಭಾವನೆಗಳನ್ನು ಪರೀಕ್ಷಿಸದೆ ಅಂಧಶ್ರದ್ಧೆಯಿಂದ ಅಂಗೀಕರಿಸುವುದಿಲ್ಲ. ರಾಜ್ಯ ಸಮಾಜಗಳ ಶಾಸನ ವಿಧಾನಗಳು ಎದುವರೆಗೂ ವ್ಯಕ್ತಿಯ ಗುಣಶುದ್ಧಿಗೂ ಗುಣವಿಕಾಸಕ್ಕೂ ಸಾಧಕ ಸಹಕಾರಿಗಳಾಗುತ್ತವೋ ಅದುವರೆಗೂ ಅವು ಉಪಕಾರಿಗಳು. ಎಲ್ಲಿ ವ್ಯಕ್ತಿಜೀವನವು ಸಮಾಜ ಕ್ಷೇಮಕ್ಕೆ ಅಪಾಯ ತರುವುದಾಗಿಲ್ಲವೋ ಅಲ್ಲಿ ವ್ಯಕ್ತಿಯ ವೈಶಿಷ್ಟ್ಯಕ್ಕೆ ರಾಷ್ಟ್ರಸಮಾಜಗಳ ನೆವದಿಂದ ಭಂಗವಾಗಬಾರದು. ವೈಶಿಷ್ಟ್ಯಕ್ಕೆ ಆದ ನಷ್ಟ ರಾಷ್ಟ್ರಕ್ಕೆ ತಟ್ಟುವ ನಷ್ಟ. ಹೀಗೆಂಬುದು ಸಂಸ್ಕೃತಿಯ ನೀತಿ.

ಸಂಸ್ಕೃತಿಯ ಕೂಗನ್ನು ಕೂಗುತ್ತಿರುವ ನಮ್ಮ ರಾಷ್ಟ್ರಪ್ರಮುಖರು ಸಂಸ್ಕೃತಿಯೆಂಬುದರ ಅಂತರ್ಭಾವಗಳನ್ನು ಎಷ್ಟುಮಟ್ಟಿಗೆ ಹುಡುಕಿ ಗ್ರಹಿಸಿಕೊಂಡಿದ್ದಾರೋ ತಿಳಿಯಲವ

ಕಾಶವಿಲ್ಲ. ಅವರು ನಾನಾ ಮತ ನಾನಾ ವಾದಗಳಲ್ಲಿ ಒಲವನ್ನು ತೋರಿಸುತ್ತಿದ್ದಾರೆ. ಒಂದು ಸಾರಿ ಜನದ ಸ್ವಪ್ರಯತ್ನ, ಇನ್ನೊಂದು ಸಾರಿ ರಾಷ್ಟ್ರಸ್ವಕರಣ; ಈಗ ಸಮಾಜಸಮತೆ, ಇನ್ನೊಂದುಸಲ ವ್ಯಕ್ತಿಶಕ್ತಿ ಪ್ರೋತ್ಸಾಹ; ಒಂದು ವೇಳೆ ಕೇವಲ ಲೌಕಿಕ ಸರಕಾರ, ಇನ್ನೊಂದು ವೇಳೆ ಮತಾಚಾರ ಪರಿಷ್ಕಾರಕ ಸರಕಾರ; ಇಂದು ಆಧುನಿಕ ಪ್ರಪಂಚದೃಷ್ಟಿ, ಇನ್ನೊಂದು ದಿನ ಪೂರ್ವ ಸಂಪ್ರದಾಯಾಸಕ್ತಿ; ಈ ಗಳಿಗೆ ಯಂತ್ರಪರಿಶ್ರಮಾಭಿವೃದ್ಧಿ, ಇನ್ನೊಂದು ಗಳಿಗೆ ಗ್ರಾಮಕೈಗಾರಿಕೆಗಳ ಪ್ರೋತ್ಸಾಹ—ಈ ರೀತಿ "ಹಿಂಗೊಮ್ಮೆ ಹಂಗೊಮ್ಮೆ ಕುಣಿಯೋಣು ಬಾರ" ಮಾಡುತ್ತಿದ್ದಾರೆ ನಮ್ಮ ನ್ನಾಳುವವರು. ಈ ಪರಸ್ಪರ ವ್ಯಾಘಾತಕಾರಣಗಳಾದ ನಾನಾ ವಾದವಿವಾದಗಳನ್ನು ಸಂಸ್ಕೃತಿಯೊಡನೆ ಸರಿಗೂಡಿಸಲಾದೀತೆ? ಅವು ಮುಖ್ಯವೆ, ಸಂಸ್ಕೃತಿ ಮುಖ್ಯವೆ?

ಸಂಸ್ಕೃತಿಯೇ ಮುಖ್ಯವಾದಂದು ಅದರ ತೇಜಸ್ಸಿನಿಂದ ಎಲ್ಲ ವಾದದ್ವಂದ್ವಗಳ ವೈಷಮ್ಯಗಳೂ ಕರಗಿ, ಅವುಗಳಲ್ಲಿ ಸಾಮರಸ್ಯವುಂಟಾದೀತು. ಆದರೆ ಸದ್ಯಕ್ಕೆ ಸಂಸ್ಕೃತಿಗೆ ಗ್ರಹಯೋಗ ಅನುಕೂಲದ್ದಾಗಿ ತೋರುತ್ತಿಲ್ಲ.

ಸಂಸ್ಕೃತಿಯೆಂಬುದು ದೊಡ್ಡ ಸಿದ್ಧಿ. ಸರಕಾರಗಳೂ ರಾಜಕೀಯಸ್ಥರೂ ಆ ಹೆಸರಿನ ಕೂಗು ಕೂಗುತ್ತ ಅದರ ಅರ್ಥವನ್ನು ಮರೆಯುತ್ತ ಕಾಲ ತಳ್ಳಬಹುದು. ಅವು ಹೇಗಾದರಿರಲಿ, ನಾವು ವ್ಯಕ್ತಿಶಃ ಸಂಸ್ಕೃತಿಯನ್ನು ಅಷ್ಟಿಷ್ಟಾದರೂ ಸಂಪಾದಿಸುವುದು ಸಾಧ್ಯವಿರುತ್ತದೆ. ವ್ಯಕ್ತಿಪ್ರಯತ್ನ ಎಷ್ಟು ದೂರ ಸಾಗಬಲ್ಲುದೋ ಅಷ್ಟು ದೂರವಾದರೂ ಅದನ್ನು ನಡಸೋಣ.

---

*

# ಭಾರತೀಯ ಸಂಸ್ಕೃತಿಗೆ ಪ್ರಶ್ನೆಗಳು

ಭಾರತೀಯ ಸಂಸ್ಕೃತಿ ಒಂದು ಮಿಶ್ರವಸ್ತು. ಅದು ಬಹು ವಿಧಗಳಾದ ಮನಃಸ್ಫೂರ್ತಿಗಳ, ನಾನಾ ತೆರದ ಸನ್ನಿವೇಶ ಪ್ರಚೋದನೆಗಳ, ನೂರಾರು ಬಗೆಯ ಸಮಾಜ ಪ್ರೇರಣೆಗಳ ಸಂಶ್ಲೇಷಣದಿಂದ ಸಿದ್ಧವಾದದ್ದು. ಅದರ ತಾಯಿಬೇರು ವೇದವೆಂದು ಇಟ್ಟುಕೊಳ್ಳಬಹುದು. ಆ ವೇದರಾಶಿಯಲ್ಲಿ ಹತ್ತಾರು ಪದರಗಳಿರುತ್ತವೆ. ಈ ಹೊತ್ತು ಪ್ರಚಾರದಲ್ಲಿರುವ ವೇದ ವಾಙ್ಮಯವು ಈಗಿನ ರೂಪವನ್ನು ತಾಳಲು ಸಾವಿರಾರು ವರ್ಷಗಳು ಹಿಡಿದಿವೆ. ಇಂದ್ರ ವರುಣ ಅಗ್ನಿ ವಾಯು ಮೊದಲಾದ ಪ್ರಕೃತಿ ಶಕ್ತಿಗಳ ಆರಾಧನೆಯಿಂದ ಮೊದಲಾಗಿ, ಅಗ್ನಿಷ್ಟೋಮ ವಾಜಪೇಯ ರಾಜಸೂಯಾದಿ ಯಾಗವಿಧಾನಗಳ ಮೂಲಕ ಹಬ್ಬಿ, ಕಡೆಗೆ ಉಪನಿಷತ್ತುಗಳ ಜೀವ-ಬ್ರಹ್ಮ ತತ್ತ್ವದಲ್ಲಿ ಸಫಲವೆನಿಸಿರುವ ಆ ವಿಪುಲ ವೇದ ಪ್ರಬಂಧದಲ್ಲಿ ನೂರಾರು ಮಂದಿ ಮಹರ್ಷಿಗಳ ಆಲೋಚನೆಗಳೂ ಚರ್ಚೆಗಳೂ ಸಿದ್ಧಾಂತಗಳೂ ಹತ್ತಾರು ಘಟ್ಟಗಳಲ್ಲಿ ಬೆಳೆದುಬಂದಿವೆ. ಅವುಗಳ ಜೊತೆಗೆ ನಾನಾ ಕಲ್ಪಸೂತ್ರ ಗೃಹ್ಯಸೂತ್ರಗಳ ಮತ್ತು ಸ್ಮೃತಿ ನಿಬಂಧಗಳ ವಿಧಿವಾಕ್ಯಗಳೂ ಸೇರಿಕೊಂಡಿವೆ. ಈ ಶ್ರುತಿ ಸ್ಮೃತಿಗಳನ್ನವಲಂಬಿಸಿಕೊಂಡು ರಾಮಾಯಣ ಭಾರತಗಳು ಜನಜೀವನವನ್ನು ಪರಿಷ್ಕಾರಗೊಳಿಸಿವೆ. ವೇದಾಂಗಗಳಾಗಿ ಅಭಿವೃದ್ಧಿಪಡೆದ ಶಿಲ್ಪಸಂಗೀತಾದಿ ಕಲೆಗಳು ಹಾಗೆಯೇ ಜನದ ಮನೋವೃತ್ತಿಯನ್ನು ಸಂಸ್ಕಾರಪಡಿಸುತ್ತ ಬಂದಿವೆ. ಶ್ರುತಿ ಸ್ಮೃತ್ಯಾದಿಗಳಿಂದ ಪ್ರತ್ಯೇಕವಾದ ಕೇವಲ ಸಾಮಾಜಿಕ ಶಕ್ತಿಗಳೂ ಅವುಗಳಿಂದ ಹುಟ್ಟಿದ ಪ್ರಶ್ನೆಗಳೂ ತೊಡಕುಗಳೂ ಇತಿಹಾಸಗಳಲ್ಲಿಯೂ ಪುರಾಣಗಳಲ್ಲಿಯೂ ಕಾವ್ಯಗಳಲ್ಲಿಯೂ

ರೂಪುಗೊಂಡಿವೆ. ಪ್ರಾಚೀನ ಸಂಪ್ರದಾಯಗಳ ಮತ್ತು ನೂತನ ಪ್ರಶ್ನೆಗಳ ಪರಸ್ಪರ ಸಂಘರ್ಷಣೆಯಿಂದ ಹೊಸ ಹೊಸ ನೀತಿ ಭಾವನೆಗಳು ಉದಿಸಿ ರೂಢಿಗೆ ಬಂದಿವೆ. ಹೀಗೆ ವೇದ, ಧರ್ಮಶಾಸ್ತ್ರ, ಇತಿಹಾಸ, ಪುರಾಣ, ಕಾವ್ಯ, ಶಿಲ್ಪಸಂಗೀತಾದಿ ಕಲೆ, ಸಮಾಜದ ಸಮಯಾಚಾರ, ಪೂರ್ವಪದ್ಧತಿ, ಶಿಷ್ಟಜನದ ಮರ್ಯಾದೆ—ಇವಿಷ್ಟು ಸೇರಿ ಹಿಂದೂಸಂಸ್ಕೃತಿಯು ಮೂಲ ಸಾಮಗ್ರಿಯಾಗಿದೆ. ಈ ವಿಸ್ತಾರವಾದ ಮೂಲಸಂಸ್ಕೃತಿಯು ಆವರಣದೊಳಗಡೆ ನಾನಾ ಸ್ಥಳೀಯ ನಾನಾ ವರ್ಗೀಯ ಸಂಸ್ಕೃತಿಗಳು ಆವಿರ್ಭವಿಸಿವೆ. ಇಂಡಿಯವು ಬಹು ವಿಶಾಲ ವಾದ ದೇಶವಷ್ಟೆ? ಹಿಮಾಲಯದಿಂದ ರಾಮೇಶ್ವರದ ವರೆಗೂ, ಕಲ್ಕತ್ತೆಯಿಂದ ಬೊಂಬಾಯು ವರೆಗೂ, ಭೂಗುಣ ವಾಯು ಗುಣಗಳು ಐವತ್ತು ಐವತ್ತು ಮೈಲಿಗೂ ಬೇರೆ ಬೇರೆ ಯಾಗಿವೆ. ಪ್ರಕೃತಿಸಿದ್ಧಗಳಾದ ಈ ಹೊರಭೇದಗಳ ಜೊತೆಗೆ ಜನರಲ್ಲಿ ಭಾಷಾಭೇದಗಳೂ, ಹಾಗೆಯೇ ಕುಲಭೇದ ಮತ ಭೇದಗಳೂ, ಆಚಾರ ಸಂಪ್ರದಾಯ ಭೇದಗಳೂ ಹುಟ್ಟಿ ಕೊಂಡಿವೆ. ಹೀಗಾಗಿ ಹಿಂದೂ ಸಮಾಜದ ಒಳಗಡೆ ನೂರಾರು ಪ್ರಾದೇಶಿಕಗಳಾದ ಮತ್ತು ವರ್ಗೀಯಗಳಾದ ಭೇದಪ್ರಭೇದ ಗಳು ಏರ್ಪಟ್ಟು, ಹಿಂದೂ ಸಂಸ್ಕೃತಿಯು ಮುಖ್ಯರೂಪ ದಲ್ಲಲ್ಲದಿದ್ದರೂ ಕೆಲಕೆಲವು ಅಂಶಗಳಲ್ಲಿ ಅನೇಕ ಪ್ರಕಾರದ್ದಾಗಿರು ತ್ತದೆ. ಇದಿಷ್ಟರ ಜೊತೆಗೆ ಕಳೆದ ಸಾವಿರ ವರ್ಷಗಳಲ್ಲಿ ಮಹ ಮ್ಮದೀಯ ಜನದ ಮತಾಚಾರಗಳ ಮತ್ತು ವಿದ್ಯಾಸಂಸ್ಕೃತಿ ಗಳ ಪ್ರಭಾವ ಅಷ್ಟೋ ಇಷ್ಟೋ ಮಿಳಿತವಾಗಿದೆ. ಈ ಅರಬ್ಬೀ ಪಾರಸೀ ಮೊದಲಾದ ವಿದೇಶಗಳಿಂದ ಬಂದ ಸಾಹಿತ್ಯ ಸಂಗೀತ ಶಿಲ್ಪ ಸಮಯಾಚಾರಗಳ ಪರಿಣಾಮವು ಹಿಂದೂ ಜನ ಜೀವನದ ಮೇಲೆ ನಾಲ್ಕಾರು ನೂರು ವರ್ಷಗಳ ಕಾಲ ನಡೆದಿದೆ. ಅನಂತರ

ಬಂದದ್ದು ಪಾಶ್ಚಾತ್ಯಪ್ರಭಾವ. ಇದರಲ್ಲಿ ಕ್ರಿಸ್ತಮತ ಆಂಗ್ಲ ಸಾಹಿತ್ಯಗಳ ಜೊತೆಗೆ ನಾನಾ ವಿಜ್ಞಾನಶಾಸ್ತ್ರಗಳ ಪ್ರಭಾವ ಮುಖ್ಯವಾದದ್ದು. ನಮ್ಮ ಹಿಂದಿನ ನಂಬಿಕೆಗಳ ವಿಷಯದಲ್ಲಿ "ಅದು ಹೇಗೆ ?" "ಇದು ಏಕೆ ?" ಎಂಬೀ ತೆರದ ಪ್ರಶ್ನಾರ್ಥಕ ಮನೋವೃತ್ತಿಯನ್ನುಂಟುಮಾಡುವುದೂ, ಬುದ್ಧಿಯ ಸ್ವತಂತ್ರ ಸಂಚಾರವನ್ನು ಪ್ರೋತ್ಸಾಹಿಸುವುದೂ, ನೂತನ ಪರೀಕ್ಷೆ ನೂತನ ಪರಿಶೋಧನೆಗಳಿಂದ ಪ್ರಕೃತಿ ತತ್ತ್ವವಿಷಯದಲ್ಲಿ ನೂತನ ಜ್ಞಾನವನ್ನು ಹುಡುಕಿಸುವುದೂ, ಜನಕ್ಕೆ ನೂತನ ಸೌಖ್ಯ ನೂತನ ಸೌಕರ್ಯಗಳನ್ನು ಸಂಪಾದಿಸಲು ನೂತನ ಯಂತ್ರ ಸಂಧಾನಗಳ ನಿರ್ಮಾಣಕ್ಕೂ ನೂತನ ಸಮಾಜ ಪರಿಷ್ಕಾರ ಪ್ರಯತ್ನಕ್ಕೂ ಸ್ಫೂರ್ತಿಯನ್ನು ಕೊಡುವುದೂ ವಿಜ್ಞಾನಶಾಸ್ತ್ರದ ಕಾರ್ಯಗಳು. ಈ ವಿಜ್ಞಾನ ಮಹಿಮೆಯೂ ನಮ್ಮ ಆರ್ಷೇಯ ಸಂಸ್ಕೃತಿಯೊಡನೆ ಕಲೆತುಕೊಳ್ಳಬೇಕಾಗಿ ಬಂದಿದೆ. ಹೀಗೆ ದಶಶತ ಪ್ರಭಾವಗಳ ಸಂಸರ್ಗದಿಂದ ಬೆಳೆಯುತ್ತಿರುವುದು ಭಾರತೀಯ ಸಂಸ್ಕೃತಿ.

ಸಾಮಾನ್ಯವಾಗಿ ಎಲ್ಲ ದೇಶಗಳ ಸಂಸ್ಕೃತಿ ಚರಿತ್ರೆಯೂ ಹೀಗೆಯೇ ಇರುತ್ತದೆ. ಇಂಗ್ಲೆಂಡಿನಲ್ಲಿ ಅಲ್ಲಿಯ ಜನಕ್ಕೆ ನೈಜವಾಗಿ ಬಂದ ಸಂಸ್ಥೆ ಸಂಪ್ರದಾಯಗಳ ಜೊತೆಗೆ ರೋಮಿನ, ಗ್ರೀಸಿನ, ಫ್ರಾನ್ಸಿನ, ಜರ್ಮನಿಯ ಸಾಹಿತ್ಯ ಸಂಸ್ಕೃತಿಗಳ ಪ್ರಭಾವಗಳೂ, ಕ್ರಿಸ್ತಮತದ ನಾನಾ ಪಂಥಗಳ ಪ್ರಭಾವಗಳೂ, ಕಡೆಗೆ ಇಂಡಿಯದ ಸಂಪರ್ಕದಿಂದ ಫಲಿಸಿದ ಸಮಾಜ ವ್ಯತ್ಯಾಸಗಳ ಪ್ರಭಾವಗಳೂ ಬೆರೆತಿವೆ. ಈ ತೆರದ ನಾನಾ ಜನಜನ್ಯತೆಯೇ ಸಂಸ್ಕೃತಿಯೆಂಬುದರ ನಿರಂತರಲಕ್ಷಣ.

ಪ್ರಪಂಚದ ನಾನಾ ದೇಶಗಳಿಗೆ ಪರಸ್ಪರ ದೂರ ಕಡಮೆಯಾಗಿ ಸಂಪರ್ಕ ಹೆಚ್ಚುತ್ತ ಬಂದಿರುವುದು ಮನುಷ್ಯ ಚರಿತ್ರೆ

ಯಲ್ಲಿ ಬಹು ಮುಖ್ಯವಾದ ಸಂಗತಿ. ಈ ಜನಜನಾಂಗ ಸಂಸರ್ಗದಲ್ಲಿ ಪ್ರತಿಯೊಂದು ದೇಶದ ಮತ್ತು ಪ್ರತಿಯೊಂದು ಜನವರ್ಗದ ಸಂಸ್ಕೃತಿಯೂ ಒಂದು ದೊಡ್ಡ ಪ್ರಾಸಾದದಂತೆ ನಾಲ್ಕಾರು ಬಾಗಿಲು ಕಿಟಕಿಗಳ ಮೂಲಕ ದಿಕ್ಕುದಿಕ್ಕಿನ ಗಾಳಿಯನ್ನೂ ಬೆಳಕನ್ನೂ ಸ್ವೀಕರಿಸಿಕೊಂಡು ದಿಕ್ಕುದಿಕ್ಕಿಗೂ ತನ್ನ ಗಾಳಿಯನ್ನೂ ನೆರಳನ್ನೂ ಬೀರುವುದಾಗುತ್ತದೆ.[1] ಗಂಗಾ ಬ್ರಹ್ಮಪುತ್ರಾದಿ ಮಹಾನದಿಗಳು ಹರಿದುಹೋಗುತ್ತ ಈ ಪಕ್ಕ ಆ ಪಕ್ಕಗಳಿಂದ ಹತ್ತಾರು ಉಪನದಿಗಳನ್ನು ಹೀರಿ ಸಮುದ್ರದ ಬಳಿ ಹತ್ತಾರು ಮುಖಗಳಿಂದ ನೀರು ಕಾರುತ್ತವೆ. ಅಂಥ ನದಿಯಂತೆ ಸಂಸ್ಕೃತಿಯು ಹುಟ್ಟಿನಲ್ಲಿ ಒಂದು, ಬಾಳಿನಲ್ಲಿಯೂ ಮುಗಿವಿನಲ್ಲಿಯೂ ನಾಲ್ಕೆಂಟು. ಜನ್ಮದಲ್ಲಿ ಏಕಸ್ಥಾನೀಯ, ಪರಿಣಾಮದಲ್ಲಿ ವಿಶ್ವವ್ಯಾಪಿ.

ಸಂಸ್ಕೃತಿ ಒಂದು ಪುರಾತನವಾದ ಆಲದ ಮರದಂತೆ. ಆ ಮರದ ಪಾದ ಒಂದೆರಡು ಗಜದಷ್ಟು ಅಗಲದ ನೆಲದಲ್ಲಿ ನಿಂತು ಆ ಒಂದೇ ಕಡೆ ಸ್ಥಿರವಾಗಿರುತ್ತದೆ. ಅದರ ತಲೆಯು ಕಡೆಯಾದರೋ ಶಾಖೋಪಶಾಖೆಗಳು ನೂರಾರು ಅಂತರಿಕ್ಷದ

---

[1] ನಾವು ಅನ್ಯಜನ ಸಂಸ್ಕೃತಿಗಳನ್ನು ಆದರದಿಂದ ನೋಡಿ, ಅವುಗಳಿಂದ ಆರಿಸಿಕೊಂಡ ಅಂಶಗಳನ್ನು ಸ್ವಸಂಸ್ಕೃತಿಯೊಡನೆ ಹೊಂದುಗೂಡಿಸಿಕೊಳ್ಳುತ್ತ, ನಮ್ಮ ವೈಶಿಷ್ಟ್ಯದ ಸಂಪತ್ತನ್ನು ಅಭಿವೃದ್ಧಿಪಡಿಸಿಕೊಳ್ಳಬೇಕೆಂಬುದೇ ಮಹಾತ್ಮಾ ಗಾಂಧಿಯವರ ಅಭಿಪ್ರಾಯ :

"I do not want my house to be walled in on all sides, nor my windows to be shut. I want the cultures of all lands to blow about my house as freely as possible; but I refuse to be blown off my feet by any of them. I refuse to live in other people's houses as an interloper, a beggar or a slave."

—M. K. Gandhi.

ಎಂಟು ದಿಕ್ಕುಗಳಲ್ಲಿಯೂ ವಿಸ್ತಾರವಾಗಿ ಚಾಚಿಕೊಂಡು ನೂರಾರು ಪ್ರದೇಶಗಳ ಗಾಳಿಗಳಿಂದ ಸಾರವನ್ನು ಹೀರಿಕೊಳ್ಳುತ್ತ ಸಾವಿರಾರು ತೆರದ ಪಕ್ಷಿಗಳಿಗೆ ಆಸರೆಯಾಗಿರುತ್ತದೆ. ಮೂಲ ದಲ್ಲಿ ಅದು ನಿಯತ, ಶಿರೋಭಾಗದಲ್ಲಿ ಯಥೇಷ್ಟ. ಸಂಸ್ಕೃತಿಯೂ ಅದರಂತೆಯೇ. ಮೂಲದಲ್ಲಿ ಅದು ಏಕವರ್ಗದ್ದು, ಏಕ ಸಮಾ ಜದ್ದು, ಏಕ ದೇಶದ್ದು. ಆದರೆ ಫಲಪರಿಣಾಮದಲ್ಲಿ ಅದು ಬಹು ವರ್ಗಸಂಸರ್ಗದ್ದು, ನಾನಾ ಸಮಾಜ ಸಂಘಟಿತವಾದದ್ದು, ವಿಶ್ವವಿಸ್ತಾರವಾದದ್ದು. ಅದು ವ್ಯಷ್ಟಿಯನ್ನು ಸಮಷ್ಟಿಯೊಡನೆ ಕೂಡಿಸುತ್ತದೆ. ಅದರ ಒಂದು ಕೊನೆ ವ್ಯಕ್ತಿ, ಇನ್ನೊಂದು ಕೊನೆ ವಿಶ್ವಪ್ರಪಂಚ. ಮಿತದಿಂದ ಅದು ಅಪರಿಮಿತಕ್ಕೆ ಹಬ್ಬು ತ್ತದೆ. ಸಂಸ್ಕೃತಿ ಹೀಗೆ ಏಕವ್ಯಕ್ತಿ ಮೂಲವಾಗಿ, ಏಕ ಸಮಾಜ ಏಕ ಜನಪದ ಮೂಲವಾಗಿ ಹುಟ್ಟಿಕೊಂಡು, ಬೆಳೆದು ಬೆಳೆದಂತೆಲ್ಲಾ ಸಮಸ್ತಲೋಕದ ಸಾರಗಳನ್ನೂ ತನ್ನೊಳಕ್ಕೆ ಅಂಗೀಕರಿಸಿಕೊಂಡು, ಸಮಸ್ತ ಲೋಕ ಜೀವನಕ್ಕೂ ತಾನು ಒಂದು ಪ್ರತ್ಯೇಕ ಸಂಪತ್ತಾಗುತ್ತದೆ. ಹೀಗೆ ವ್ಯಷ್ಟಿ ಸಮಷ್ಟಿ ಸಂಮಿಶ್ರಿತವಾದದ್ದು ಸಂಸ್ಕೃತಿ.

ಭಾರತೀಯ ಸಂಸ್ಕೃತಿಯ ಅಂತಸ್ಸಾರವಿಂಥಾದ್ದೆಂಬು ದನ್ನು ಮೇಲೆ ಸಂಗ್ರಹವಾಗಿ ನೋಡಿದ್ದೇವೆ. (೧) ಆತ್ಮವಸ್ತು ವಿನ ಪರಮೋತ್ಕೃಷ್ಟತೆ, (೨) ತದ್ದೃಷ್ಟಿಯಿಂದ ನಾನಾ ಪುರುಷಾರ್ಥಗಳಲ್ಲಿ ಒಂದು ತಾರತಮ್ಯವ್ಯವಸ್ಥೆ, (೩) ತದನು ಗುಣವಾದ ಧರ್ಮವೆಂಬ ಜೀವನ ನಿಯಮಕ್ರಮ—ಈ ಮೂರು ಭಾರತೀಯ ಸಂಸ್ಕೃತಿಯ ಆಧಾರತತ್ತ್ವಗಳು. ಇವುಗಳೊಡನೆ ನಾನಾ ವಿದೇಶೀಯ ಪ್ರಭಾವಗಳನ್ನು ಸಮನ್ವಯಪಡಿಸಿಕೊಳ್ಳ ಬೇಕಾದ ಆವಶ್ಯಕತೆ ಈಗ ನಮ್ಮ ದೇಶದಲ್ಲಿ ಎಲ್ಲರಿಗೂ ಮನ ದಟ್ಟಾಗಿದೆ. ಈ ಸಮನ್ವಯ ಕಾರ್ಯ ಸುಲಭವಾದದ್ದೇನೂ

ಅಲ್ಲ; ಏಕೆಂದರೆ, ಪಾಶ್ಚಾತ್ಯರೂ ಇತರರೂ ಪ್ರಪಂಚವಸ್ತು ಗಳಿಗೆ ಬೆಲೆ ಕಟ್ಟುವ ರೀತಿಯು ನಮ್ಮದರಿಂದ ಬುಡಮುಟ್ಟ ಬೇರೆ ಯಾದದ್ದು. ನಮ್ಮ ಆತ್ಮ ಪಾರಮ್ಯದ ಗಣನೆ ಅವರ ಜೀವಿತ ವ್ಯವಹಾರಗಳಲ್ಲಿ ಪ್ರಧಾನವಾಗಿ ತೋರುತ್ತಿಲ್ಲ. ಐಹಿಕ ಭೋಗಕ್ಕೂ ತತ್ಸಾಧನ ಸಂಪಾದನೆಗೂ ಅವರು ಜೀವನ ಧ್ಯೇಯಗಳಲ್ಲಿ ಮೊದಲನೆಯ ಸ್ಥಾನವನ್ನು ಕೊಡುತ್ತಾರೆ, ನಮ್ಮ ಸಂಸ್ಕೃತಿಯಂತೆ ಆತ್ಮಸಂದರ್ಶನಕ್ಕಲ್ಲ. ಹೀಗೆ ಅವರೂ ನಾವೂ ಒಂದು ದೃಷ್ಟಿಯಿಂದ ಪರಸ್ಪರ ಪ್ರತಿವರ್ತಿಗಳಾಗಿದ್ದೇವೆ. ಆದರೂ ಲೋಕಸಂಪರ್ಕ ನಮಗೆ ಅನಿವಾರ್ಯವಾದದ್ದಾಗಿದೆ. ಯೂರೋಪ್ ಅಮೆರಿಕಗಳ ಪ್ರಭಾವವನ್ನು ನಾವು ಸಂಪೂರ್ಣ ವಾಗಿ ದೂರ ಬಿಡುವಹಾಗಿಲ್ಲ; ಅವು ಸ್ವತಃ ಕೆಟ್ಟವೆಂದೂ ದೂಷಿಸುವ ಹಾಗಿಲ್ಲ. ಅವುಗಳಲ್ಲಿ ನಮಗೆ ಅಪೇಕ್ಷಣೀಯ ವಾದ ಅಂಶಗಳು ಎಷ್ಟೋ ಉಂಟೆಂಬುದನ್ನು ನಾವು ಒಪ್ಪಿ ಕೊಳ್ಳಲೇ ಬೇಕು. ಹೀಗಿರುವುದರಿಂದ, ಆ ಅನ್ಯಸಂಸ್ಕೃತಿಗಳನ್ನು ನಮ್ಮ ಸಂಸ್ಕೃತಿಯೊಡನೆ ಕಲೆಸಿಕೊಳ್ಳುವುದರಲ್ಲಿ, ನಾವು ಅವು ಗಳನ್ನು ಪರೀಕ್ಷಿಸಿ, ಯೋಗ್ಯತಾಯೋಗ್ಯತೆಗಳನ್ನು ನಮ್ಮ ದೃಷ್ಟಿ ಯಿಂದ ನಿರ್ಣಯಿಸಿಕೊಳ್ಳಬೇಕಾಗಿದೆ. ಪಾಶ್ಚಾತ್ಯ ದೇಶಗಳಲ್ಲಿ ಪ್ರಬಲವಾಗಿರುವ ಭೋಗಪ್ರಧಾನ ಸ್ವಾತಂತ್ರ್ಯದ, ಮತ್ತು ಸರ್ವ ಜನಸಮತೆಯ, ಮತ್ತು ಅಧಿಕ ಸಂಖ್ಯಾ ಪ್ರಭುತ್ವದ, ಮತ್ತು ಸಮಾಜ ಸರ್ವಾಧಿಕಾರದ ಭಾವನೆಗಳನ್ನು ಭಾರತೀಯರು ಜಗತ್ಸೃಷ್ಟಿಯ ನೈಸರ್ಗಿಕ ಲಕ್ಷಣಗಳ ದೃಷ್ಟಿಯಿಂದಲೂ ಪರಮ ಸದ್ವಸ್ತುವಾದ ಆತ್ಮತತ್ತ್ವದ ದೃಷ್ಟಿಯಿಂದಲೂ ಪುನರ್ವಿಮರ್ಶೆ ಮಾಡಿ ನೋಡಬೇಕಾಗಿದೆ. ಇದು ಬಹುಮಂದಿ ಪ್ರಾಜ್ಞರು ಸಾವಧಾನವಾಗಿ ಮಾಡಿದರೆ ಆಗಬಹುದಾದ ಕಾರ್ಯವೇ ಹೊರತು ಸಾಮಾನ್ಯ ಜನರು ಆಯಾ ಕ್ಷಣದ ಆವೇಶದಿಂದಲೂ

ಯುಕ್ತಿಯಿಂದಲೂ ನಡಸಲಾಗುವ ಕೆಲಸವಲ್ಲ. ಒಟ್ಟಿನಲ್ಲಿ ಪ್ರತಿಯೊಬ್ಬ ಭಾರತೀಯನೂ ವಿದೇಶೀಯ ಸಂಸ್ಥೆಗಳನ್ನೂ ಸಂಪ್ರದಾಯಗಳನ್ನೂ ನಮ್ಮಲ್ಲಿಗೆ ತಂದುಕೊಳ್ಳುವುದರಲ್ಲಿ ಅಂಧಾನುಕರಣ ಮಾಡದೆ, ಪ್ರತಿಯೊಂದು ವಿಚಾರದಲ್ಲಿಯೂ "ಭಾರತೀಯ ದೃಷ್ಟಿಯೆಂಬುದೊಂದುಂಟು, ಮತ್ತು ಎಲ್ಲ ಮಾರ್ಪಾಟು ಬೇರ್ಪಾಟುಗಳೂ ನಮ್ಮ ಭಾರತೀಯತೆಗೆ ಭಂಗಕಾರಿಗಳಲ್ಲದೆ ಇರಬೇಕು" ಎಂಬ ತತ್ತ್ವವನ್ನು ವಿಶದವಾಗಿ ನೆನಪಿನಲ್ಲಿರಿಸಿಕೊಂಡು ನಡೆದರೆ ಆಗ ಆ ಸ್ವದೇಶೀಯ ವಿದೇಶೀಯ ಸಮನ್ವಯವು ನಮಗೆ ಶ್ರೇಯಸ್ಕರವಾಗಿಯೂ ಲೋಕಕ್ಕೆ ಸಹಾಯಕರವಾಗಿಯೂ ಇದ್ದೀತು.

---

## ಲೌಕಿಕಪ್ರಗತಿ

ಒಂದು ಅಪಾರ್ಥಸಂಭವವನ್ನು ಇಲ್ಲಿ ನಿವಾರಿಸಬೇಕಾಗಿದೆ. ಸಂಸ್ಕೃತಿಗೂ ಭೌತವಿಜ್ಞಾನ ಮೂಲವಾದ ಐಹಿಕ ಪ್ರಗತಿಗೂ ಸಹಜವಾದ ವಿರೋಧವೇನುಮಾತ್ರವೂ ಇಲ್ಲ. ಸಂಸ್ಕೃತಿಗೆ ಅವಶ್ಯವಾದ ಮೂಲಸಾಮಗ್ರಿಗಳಲ್ಲಿ ವಿಜ್ಞಾನ ಒಂದು. ನಾನಾ ಪ್ರಕೃತಿವಿಜ್ಞಾನ ಸಮಾಜವಿಜ್ಞಾನ ಶಾಸ್ತ್ರಗಳ ಮೂಲಕ ಸಾಧ್ಯವಾಗುವ ಸೃಷ್ಟಿನಿಯಮ ಪರಿಜ್ಞಾನ ಒಂದು ಕಡೆ; ಇನ್ನೊಂದು ಕಡೆ ಕಾವ್ಯಕಲಾನುಭವಗಳಿಂದ ಲಭ್ಯವಾಗುವ ಅಂತರಂಗ ಮರ್ಮ ಪರಿಜ್ಞಾನ—ಈ ಎರಡು ಬಗೆಯ ಸತ್ಯಾಂಶ ಸಂಗ್ರಹಗಳ ಆಧಾರದ ಮೇಲೆ ಏಳುವ ವಿಚಾರಸೌಧವೇ ಸಂಸ್ಕೃತಿ. ಅದರಲ್ಲಿ ಅಂತರಾತ್ಮಸಮಾಧಾನಕ್ಕೆ ಹೇಗೆ ಸ್ಥಾನವುಂಟೋ ಹಾಗೆಯೇ ಮನಸ್ತೃಪ್ತಿಯ ಸಾಧನೆಗೂ ಸ್ಥಾನವುಂಟು, ಮತ್ತು ದೇಹಸೌಖ್ಯದ ಉಪಕರಣಯೋಜನೆಗೂ ಹಾಗೆ

ಸ್ಥಾನವುಂಟು. ಸಂಸ್ಕೃತಿಯು ಲೋಕಸಂಪತ್ತನ್ನು ಬೇಡ ವೆನ್ನುವುದಿಲ್ಲ; ಬೇಕೆಂದೇ ಎನ್ನುತ್ತದೆ; ಆದರೆ ಅದನ್ನೊಂದು ಮಿತಿಯಲ್ಲಿ, ಒಂದು ಕ್ರಮದಲ್ಲಿ ಬೇಕೆನ್ನುತ್ತದೆ. ಸಂಸ್ಕೃತಿಯು ವಿಜ್ಞಾನಶಾಸ್ತ್ರಗಳನ್ನು ಬೇಡವೆನ್ನುವುದಿಲ್ಲ; ಬೇಕೆಂದೇ ಎನ್ನುತ್ತದೆ; ಆದರೆ ವಿಜ್ಞಾನವು ತಾನೇತಾನಾಗಿ ಮೆರೆಯ ಬೇಕೆನ್ನದೆ ಕಲಾತತ್ತ್ವ ಅಧ್ಯಾತ್ಮ ತತ್ತ್ವಗಳೊಡನೆ ಬೆರೆಯ ಬೇಕೆನ್ನುತ್ತದೆ. ಸಂಸ್ಕೃತಿಯು ಸಮಾಜದಲ್ಲಿ ನವೀನ ಪರಿಷ್ಕಾರ ಬೇಡವೆನ್ನುವುದಿಲ್ಲ; ಅದು ಬೇಕೆಂದೇ ಎನ್ನುತ್ತದೆ; ಆದರೆ ನೂತನವು ಪ್ರಾಚೀನದ ಅನುಸ್ಯೂತವಾಗಿ, ಅಖಂಡ ಪ್ರವಾಹ ವಾಗಿ, ಇರಬೇಕೆನ್ನುತ್ತದೆ. ಸಂಸ್ಕೃತಿಯು ಯಾವ ಒಳ್ಳೆಯ ದನ್ನೂ ಬೇಡವೆನ್ನುವುದಿಲ್ಲ; ಎಲ್ಲ ತೆರದ ಎಲ್ಲ ದರ್ಜೆಗಳ ಒಳ್ಳೆ ಯದುಗಳನ್ನೂ ಅದು ಬೇಕೆಂದೇ ಎನ್ನುತ್ತದೆ. ಆದರೆ ಎಲ್ಲವೂ ಒಂದು ಔಚಿತ್ಯವಿಹಿತವಾದ ಮಿತಿಯಲ್ಲಿದ್ದುಕೊಂಡು ಅನ್ಯೋನ್ಯ ಸಂಮಿಳಿತವಾಗಬೇಕೆನ್ನುತ್ತದೆ.

---

## ಸುಸಂಸ್ಕೃತನೆಂಥವನು ?

ಸುಸಂಸ್ಕೃತನ ಲಕ್ಷಣಗಳು ಮೂಲರೂಪದಲ್ಲಿ ಮುಖ್ಯವಾಗಿ ಐದು :—

(೧) ಸ್ವಸ್ಥಾನಪರಿಜ್ಞಾನ.
(೨) ಪರೇಂಗಿತ ಪರಿಗ್ರಹಣ.
(೩) ಸ್ವಾರ್ಥ ನಿಯಮನ.
(೪) ಸಮನ್ವಯದೃಷ್ಟಿ.
(೫) ಸರಸತೆ.

ತಾತಂದಿರು—ಅವನಿಗೆ ತಿಳಿಯುವುದಿಲ್ಲ; ನಮಗೆ ತಿಳಿಯುತ್ತದೆ. ನಾವು ಹೇಳಿಕೊಡಬೇಕು.

ನಮ್ಮ ತಾತಂದಿರು ಹಾಗೆ ಮಾಡಿದ್ದರಿಂದ ನನಗೆ ಉತ್ಸಾಹ ಭಂಗವಾಗಲಿ ಕೊರತೆಯಾಗಲಿ ಆದಂತೆ ನನಗೆ ಜ್ಞಾಪಕವಿಲ್ಲ. ಅಂದಿನ ಭಜನೆ ಮುಗಿದು, ಹೊರಗಿನವರು ಅವರವರ ಮನೆಗಳಿಗೆ ಹೋದಬಳಿಕ ನಾವು ಊಟಮಾಡುತ್ತಿದ್ದಾಗ ನಮ್ಮ ತಾತಂದಿರು ನನ್ನನ್ನು ವಿಶ್ವಾಸದಿಂದ ಮಾತನಾಡಿಸಿ, ಪುನಃ ಈ ರೀತಿ ಹೇಳಿದರು:—"ಮಗೂ, ನಾಲ್ಕು ಮಂದಿ ಇರುವ ಕಡೆಗೆ ನೀನು ಹೋದಾಗ ನಿನಗೆ ತಕ್ಕ ಜಾಗ ಯಾವುದೆಂಬುದನ್ನು ತಿಳಿದು ಅಲ್ಲಿರಬೇಕು. ಅದೇ ಜಾಣತನ. ಬರೆಯುವ ಗುಮಾಸ್ತನು ಮಶಿ ಕುಡಿಕೆಯನ್ನು ಎಲ್ಲಿಟ್ಟುಕೊಳ್ಳುತ್ತಾನೆಂಬುದನ್ನು ನೋಡಿ ಅವನ ಯೋಗ್ಯತೆಯನ್ನು ಗೊತ್ತುಮಾಡಬಹುದು. ಹಾಗೆಯೇ ಒಬ್ಬ ಮನುಷ್ಯನು ಒಂದು ಕಡೆಗೆ ಬಂದಾಗ ಎಂಥ ಜಾಗದಲ್ಲಿ ಕುಳಿತುಕೊಳ್ಳುತ್ತಾನೆ ಎಂಬುದನ್ನು ನೋಡಿ ಅವನ ಜಾಣತನವನ್ನು ಗೊತ್ತುಮಾಡಬಹುದು. ನೀನು ಕುಳಿತ ಬಳಿಕ ಯಾರಾದರೂ ಬಂದು ನಿನ್ನನ್ನು—"ಇಲ್ಲಿ ಬೇಡ, ಅಲ್ಲಿ ಹೋಗು" ಎಂದು ಹೇಳುವಂತೆ ಆಗಬಾರದು ಎಂದು ಮುಂತಾಗಿ ಹೇಳಿದರು. (ಅಂಥ ಉಪದೇಶಗಳು ನನ್ನಲ್ಲಿ ಫಲಕ್ಕೆ ಬಂದಿವೆಯೆಂದು ಯಾರೂ ಭಾವಿಸತಕ್ಕದ್ದಲ್ಲ.) ದೊಡ್ಡ ಪ್ರಪಂಚಕ್ಕೂ ಆ ಉಪದೇಶ ಅನ್ವಯಿಸುತ್ತದೆ. ನಮ್ಮ ವಂಶಪರಿಸ್ಥಿತಿಯಿಂದ, ನಮ್ಮ ಜಾಯಮಾನದಿಂದ, ನಮ್ಮ ವಿದ್ಯೆಶಕ್ತಿಗಳಿಂದ, ನಮ್ಮ ರೂಪಚರ್ಯಾ ಪ್ರಭಾವದಿಂದ, ಮತ್ತು ನಮ್ಮ ಅದೃಷ್ಟದಿಂದ ಸಹ ನಮಗೆ ಸಮಾಜದಲ್ಲಿ ಒಂದು ಸ್ಥಾನ ಗೊತ್ತಾಗಿರುತ್ತದೆ. ನಮ್ಮ ಸುತ್ತಮುತ್ತಲಿನವರಿಗೂ ನಮಗೆ ಸಲ್ಲುವಂತೆ ಸಲ್ಲಬೇಕಾಗಿರುವ ಮಾನ ಮರ್ಯಾದೆಗಳ ಹಕ್ಕೂ ನಮ್ಮ ಸ್ಥಾನವನ್ನು ಗೊತ್ತುಮಾಡು

ವುದರಲ್ಲಿ ಸೇರಿರುತ್ತದೆ. ನಮ್ಮ ಮತ್ತು ಇತರರ ಅನ್ಯೋನ್ಯ ಪ್ರಾಪ್ಯಗಳ ನಡುವೆ ಆದ ಒಂದು ಒಡಂಬಡಿಕೆಯೇ ನಮಗೆ ದೊರೆಯುವ ಸ್ಥಾನ. ಅದೇನೆಂಬುದನ್ನು ನಾವು ಗ್ರಹಿಸಿ, ಅದಕ್ಕೆ ತಕ್ಕಂತೆ,—ಎಂದರೆ ಆ ಯೋಗ್ಯತೆಯನ್ನು ಮೀರಿ ಸಾಹಸಮಾಡ ದೆಯೂ ಅದಕ್ಕಿಂತ ಕೀಳ್ಮಟ್ಟಕ್ಕಿಳಿಯದೆಯೂ—ನಡೆದುಕೊಳ್ಳ ಬೇಕು. ಜಾಗದಿಂದ ಜವಾಬ್ದಾರಿ. ಸ್ವಂತಜವಾಬ್ದಾರಿಯು ಅರಿ ವಾದ ಮೇಲೆ ಅದಕ್ಕೆ ತಕ್ಕ ನಡವಳಿಕೆ. ಹಾಗೆ ಒಂದು ಕಡೆ ನಯವಿನಯ ಸೌಜನ್ಯಾಭ್ಯಾಸ, ಇನ್ನೊಂದು ಕಡೆ ಶಕ್ತಿ ಸಾಮರ್ಥ್ಯ ವಿಕಾಸ. ಹೀಗೆ ಮನುಷ್ಯನ ಲೋಕಯೋಗ್ಯತೆಯ ಅಭಿವೃದ್ಧಿ.

ಸ್ವಸ್ಥಾನವಿವೇಚನೆಯೇ ಕರ್ತವ್ಯಜ್ಞಾನಕ್ಕೆ ಮಾತೃಕೆ. ಯಾವ ಒಂದು ಸನ್ನಿವೇಶದಲ್ಲಿಯಾದರೂ ನಮ್ಮ ಕರ್ತವ್ಯವೇ ನೆಂಬುದನ್ನು ಒಂದು ಕಡೆಯ ನಮ್ಮ ಸ್ವಂತ ಗುಣಶಕ್ತಿಗಳೂ, ಇನ್ನೊಂದು ಕಡೆಯ ನಮ್ಮ ಸುತ್ತಮುತ್ತಲಿನವರ ಅಪೇಕ್ಷಿ ಹಿತಾವಶ್ಯಕತೆಗಳೂ ಎರಡೂ ಸೇರಿ ನಿರ್ಧರಿಸುತ್ತವೆ. ಇದೇ ಸ್ವಧರ್ಮದ ಭಾವನೆಯ ತತ್ತ್ವ. ಮನುಷ್ಯನ ಒಳಗಣದರಿಂದ ಹೊರಗಣದಕ್ಕೂ ಹೊರಗಣದರಿಂದ ಒಳಗಣದಕ್ಕೂ ನಷ್ಟ ಕಡಮೆಯಾಗಿ ಪ್ರಯೋಜನ ಹೆಚ್ಚಾಗಿ ಆಗುವಂತೆ ನಡೆಯುವ ಹೊಂದಿಕೆಯ ನಡವಳಿಕೆಯೇ ಧರ್ಮ. ಒಬ್ಬೊಬ್ಬ ವ್ಯಕ್ತಿಯ ಗುಣವಿಶೇಷ ಸಂದರ್ಭವಿಶೇಷಗಳ ದೃಷ್ಟಿಯಿಂದ ಧರ್ಮವನ್ನು ಕಂಡಾಗ ಅದು ಸ್ವಧರ್ಮ. ಸ್ವಸ್ಥಾನದಿಂದ ಸ್ವಧರ್ಮ.

## (೨) ಪರೇಂಗಿತ ಪರಿಗ್ರಹಣ

ಬಾಹ್ಯ ಸಂದರ್ಭ ವಿವೇಚನೆಯನ್ನು ಕುರಿತು ಈಗ ತಾನೆ ಒಂದು ಮಾತು ಹೇಳಿದೆಯಷ್ಟೆ. ಅದರಲ್ಲಿ ಮುಖ್ಯವಾದ ಅಂಶ

ಪರೇಂಗಿತ ಪರಿಜ್ಞಾನ. ನಾವು ಮಾಡಿದ ಕೆಲಸ ಇತರರ ಮೇಲೆ ಹೇಗೆ ಹೇಗೆ ಪರಿಣಾಮವನ್ನುಂಟುಮಾಡೀತು ಎಂಬು ದನ್ನು ಎಡೆಬಿಡದೆ ಚಿಂತಿಸುತ್ತಿರಬೇಕು. ನಮ್ಮ ಉದ್ದೇಶ ಒಳ್ಳೆಯದೆಂಬ ಒಂದು ನಂಬಿಕೆಯೇ ನಮ್ಮ ನಡತೆಯನ್ನು ಸಾಧುವಾಗಿಸಲಾರದು. ನಮ್ಮ ಉದ್ದೇಶಕ್ಕೆ ಸಂಬಂಧಪಟ್ಟ ಇತರರ ಮನೋಗತವೇನೆಂಬುದನ್ನು ನಾವು ಸ್ವಂತ ಊಹಾಶಕ್ತಿ ಯಿಂದ ಕಂಡುಕೊಳ್ಳಲು ಕೂಡಿದ ಮಟ್ಟಿಗೆ ಪ್ರಯತ್ನಮಾಡ ಬೇಕು.

"ಪರೇಂಗಿತಜ್ಞಾನ ಫಲಾ ಹಿ ಬುದ್ಧಯಃ"

ಇಂಗಿತಜ್ಞಾನವೇ ಬುದ್ಧಿವಂತಿಕೆಯ ಗುರುತು. ಇತರರು ತಮ್ಮ ಮನೋಗತವನ್ನು ಬಾಯಿಬಿಟ್ಟು ಹೇಳಿದ ಬಳಿಕ ನಾವು ಅದರಂತೆ ನಡೆಯುವುದರಲ್ಲಿ ಸೊಗಸೇನೂ ಇಲ್ಲ. ಅವರು ಸ್ಪಷ್ಟವಾಗಿ ಹೇಳಿದ ಮೇಲೆ, ದಾಕ್ಷಿಣ್ಯಕ್ಕೆ ಕಟ್ಟುಬಿದ್ದೋ, ಅವರ ಅಸಮಾಧಾನದ ಭಯದಿಂದಲೋ, ಅವರಮೇಲೆ ಹಂಗು ಹೊರಿಸ ಬೇಕೆಂಬ ಆಶಯದಿಂದಲೋ, ಹೀಗೆ ಇಂಗಿತಾಭಿಜ್ಞತೆಗಿಂತಲೂ ಬೇರೆಯದಾದ ಯಾವುದೋ ಒಂದು ಕಾರಣದಿಂದ ನಾವು ಅವರಾಡಿದಮಾತನ್ನು ನಡಸಿಕೊಡಬಹುದು. ಇದರಿಂದ ಆ ಇತರ ರಿಗೆ ಆಗಬಹುದಾದ ತೃಪ್ತಿ ಮೊದಲನೆಯ ಮಟ್ಟದ್ದಲ್ಲ, ಎರಡ ನೆಯ ಮಟ್ಟದ್ದು. ಇಂಗಿತಾನುವರ್ತನೆಯಿಂದ ಅವರಿಗೆ ಆಗುವ ತೃಪ್ತಿಯೇ ಮೇಲ್ತರದ್ದು. ಆ ಇತರರು ದಾಕ್ಷಿಣ್ಯ ಸಂಕೋಚಗಳಿಂದ ಬಾಯಬಿಗಿದು ತಮ್ಮ ಇಂಗಿತವನ್ನು ಹೊರಹೊರಡಿಸದೆ ಇದ್ದರೆ ಆಗ ನಮ್ಮ ಇಂಗಿತಜ್ಞಾನವಿಲ್ಲದ ನಡೆವಳಿಕೆಯಿಂದ ಅವರ ಮನಸ್ಸಿಗೆ ನೋವೇ ಆದೀತು.

ಹೀಗೆ ಯಾವ ತನ್ನ ಒಂದು ನಡವಳಿಕೆಯಿಂದ ಅನ್ಯರಿಗೆ ಸಂತುಷ್ಟಿಯಾದೀತು, ಯಾವುದರಿಂದ ಅನಿಷ್ಟವಾದೀತು ಎಂಬು

ದನ್ನು ಮನಗಾಣಬೇಕಾದರೆ, ಆ ಇತರರ ಸ್ಥಾನದಲ್ಲಿ ತನ್ನನ್ನು ತಾನು ಇರಿಸಿಕೊಳ್ಳಬೇಕು. ಮೇಲೆ ಹೇಳಿದ ಸ್ವಸ್ಥಾನವಿವೇಚನೆಯೊಡನೆ ಪರಸ್ಥಾನ ಪರಾಮರ್ಶೆ ಏಕೀಭವಿಸಬೇಕು. ನಾನು ಅವರ ಸ್ಥಾನದಲ್ಲಿ ಇದ್ದಿದ್ದರೆ ಎಷ್ಟು ಮಟ್ಟಿನ ವಿವೇಕ ತೋರುತ್ತಿದ್ದೆ ? ಬಹುಶಃ ಏನು ಮಾಡಿರುತ್ತಿದ್ದೆ ? ಏನು ಮಾಡಿದ್ದಿದ್ದರೆ ಸರಿಯಾಗಿರುತ್ತಿತ್ತು ?—ಎಂದು ಪ್ರಶ್ನೆ ಹಾಕಿಕೊಂಡು ತನ್ನನ್ನು ಮತ್ತೊಬ್ಬನಲ್ಲಿ ಐಕ್ಯಮಾಡಿ ನೋಡುವ ಅಭ್ಯಾಸವನ್ನು ಕಲಿತವನೇ ಸುಸಂಸ್ಕೃತನು.

| " ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ "

[ಯಾವುದು ತನಗೆ ಒಳ್ಳೆಯದಲ್ಲವೋ ಅದನ್ನು ತಾನು ಇತರರಿಗೂ ಮಾಡತಕ್ಕದ್ದಲ್ಲ.] \

ಹೀಗೆ ಮನುಷ್ಯರ ಪರಸ್ಪರ ಬಾಂಧವ್ಯಗಳಲ್ಲಿ ಮಧುರತೆಯನ್ನುಂಟುಮಾಡತಕ್ಕದ್ದು ಇಂಗಿತಜ್ಞತೆ, ಕಹಿಯನ್ನುಂಟು ಮಾಡತಕ್ಕದ್ದು ಇಂಗಿತೋಪೇಕ್ಷೆ. ಈ ಪ್ರಪಂಚಯಂತ್ರದ ಚಕ್ರಗಳೂ ಕೀಲುಗಳೂ—ಒಂದಕ್ಕೊಂದರಿಂದ ತಿಕ್ಕಾಟವಾಗದಂತೆ, ಅವು ಕಿರುಗುಟ್ಟದಂತೆ—ಸುಗಮವಾಗಿ ನಡೆಯಬೇಕಾದರೆ, ಸೌಹಾರ್ದಪೂರ್ವಕವಾದ ಇಂಗಿತಜ್ಞತೆಯ ಎಣ್ಣೆ ಯಥೇಷ್ಟವಾಗಿ ಅವುಗಳಲ್ಲಿ ಹರಿಯುತ್ತಿರಬೇಕು. ಈ ಬಗೆಯ ಆತ್ಮೀಯತೆ ಪರಕೀಯತೆಗಳ ಏಕೀಕರಣವು ಸಾಧ್ಯವಾಗತಕ್ಕದ್ದು ಊಹನಶಕ್ತಿ ವಿಕಾಸಪೂರ್ವಕವಾದ ಒಂದು ಭಾವವಿಸ್ತಾರದಿಂದ. ಅಂಥ ಆತ್ಮಸ್ವಭಾವನಾಪ್ರಸಾರದಿಂದ ಇಂಗಿತಜ್ಞತೆ. ಅದಕ್ಕೆ ಸಾಧಕಗಳು ಸತ್ಕಾವ್ಯಾಲೋಡನೆ, ಲೋಕಾನುಭವವಿವೇಕ, ಪರಮಾರ್ಥಚಿಂತನೆ.

ಮನುಷ್ಯ ಸ್ವಭಾವದ ಆಳವನ್ನು ಕಂಡಷ್ಟೂ, ಮನುಷ್ಯ ಪ್ರಾಣಿಗಿರುವ ಕಷ್ಟ ಪರೀಕ್ಷೆಗಳನ್ನು ಚಿಂತಿಸಿದಷ್ಟೂ,

ಮನುಷ್ಯ ಜೀವನದಲ್ಲಿ ಕಾಣಬರುವ ಕಲ್ಮಷ ದೌರ್ಬಲ್ಯಗಳ ಕಾರಣದಿಂದ ಸುಸಂಸ್ಕೃತನ ಹೃದಯದಲ್ಲಿ ಆಗ್ರಹವುಂಟಾಗುವುದಕ್ಕೆ ಬದಲಾಗಿ ಸ್ನೇಹಾನುಕಂಪೆಯೇ ಉದಿಸುತ್ತದೆ. ಮನುಷ್ಯನ ಚಪಲಕಾರ್ಪಣ್ಯಗಳನ್ನು ಕುರಿತು ಅವನು ಅತಿಯಾಗಿ ಟೀಕಿಸಲಾರ. ಸಹನೆ, ಉದಾರತೆ, ಕ್ಷಮೆ—ಇವು ಸಂಸ್ಕೃತ ಪುರುಷನು ಕೃಷಿಮಾಡಿಕೊಂಡಿರುವ ಗುಣಗಳಲ್ಲಿ ಸಾರ್ವಭೌಮ ಪದವಿಯಲ್ಲಿರತಕ್ಕವು. ಅವನು ತಪ್ಪನ್ನು ಕಂಡಾಗ ತನ್ನನ್ನೇ ತಪ್ಪಿತಸ್ಥನ ಜಾಗದಲ್ಲಿ ನಿಂತವನಂತೆ ಭಾವಿಸಿಕೊಂಡು ನಡೆಯುತ್ತಾನೆ.

## (೩) ಸ್ವಾರ್ಥನಿಯಮನ

ಪರೇಂಗಿತಗ್ರಹಣಕ್ಕೆ ದಾರಿ ಸ್ವಾರ್ಥದಮನದ ಮೂಲಕ. ಈ ಸ್ವಾರ್ಥವೆಂಬ ನಮ್ಮ ಅಂತರಂಗದ ಗೂಢಾಂಶವು ನೂರಾರು ಬಹು ಸೂಕ್ಷ್ಮರೂಪಗಳನ್ನು ತಾಳುತ್ತಿರುತ್ತದೆ. ನಮ್ಮ ತಿಳಿವಳಿಕೆಯನ್ನು ವಂಚಿಸಿಯೇ ಅದು ಹೊರಕ್ಕೆ ಹೊರಡುತ್ತಿರುತ್ತದೆ. ಧನಧಾನ್ಯಾದಿ ಐಶ್ವರ್ಯಲೋಭನೆ, ಇಷ್ಟವಸ್ತುವಿನ ಮೇಲಣ ಹಂಬಲ, ಅಧಿಕಾರಲಾಲಸೆ, ಕೀರ್ತಿಕಾಮನೆ—ಇಂಥ ನಾನಾ ಆಶಾಪಿಶಾಚಿಗಳನ್ನು ಬಚ್ಚಿಡಲು ನಾವು ಎಷ್ಟು ಪ್ರಯತ್ನ ಮಾಡಿದರೂ ಅವು ಮಾಡಿಸುವ ಚೇಷ್ಟೆಗಳು ಇತರರಿಗೆ ಎದ್ದು ಕಾಣುತ್ತಿರುತ್ತವೆ. ಅವು ಒಂದೊಂದು ವೇಳೆಯಾದರೂ, ಇತರರು ಆಕ್ಷೇಪಿಸಿದಾಗಲಾದರೂ, ನಮಗೂ ಅಷ್ಟಿಷ್ಟಾದರೂ ತೋರಿ ಬರುವುದುಂಟು. ಮನುಷ್ಯನು ಸಾಮಾನ್ಯವಾಗಿ ತನ್ನಲ್ಲಿ ಅಂಥ ಲೋಭಗಳಿಲ್ಲವೆಂದು ಹೇಳಿಕೊಳ್ಳುವಷ್ಟುಮಟ್ಟಿಗಾದರೂ—ಆ ಲಕ್ಷಣಗಳನ್ನು ಮರೆಮಾಚಿಡುವಷ್ಟರ ಮಟ್ಟಿಗಾದರೂ—ಅವುಗಳ ವಿಷಯದಲ್ಲಿ ನಾಚಿಕೆಯಿಟ್ಟುಕೊಂಡಿರುತ್ತಾನೆ.

ಈ ಪ್ರಕಟವಾದ ಆಶೆ ಲೋಭಗಳಿಗಿಂತ ಗೂಢವಾದುವು ಇನ್ನು ಕೆಲವು ಮಮತೆಗಳು. ಇವಕ್ಕೆ ಹೆಮ್ಮೆ, ಗುಣಾಭಿಮಾನ, ಚಿತ್ತಸಮುನ್ನತಿ ಮೊದಲಾದ ಒಳ್ಳೆಯ ಹೆಸರುಗಳನ್ನು ಕೊಟ್ಟು ಅವನ್ನು ಆಡ್ಡಾಡಿಸುತ್ತೇವೆ. ಮನೆಯಲ್ಲಿ ನಮ್ಮ ಎಳೆಯಮಗು ಒಂದು ಮುದ್ದು ಮಾತನ್ನಾಡಿದ್ದರೆ, ಒಂದು ಜಾಣತನದ ಚೇಷ್ಟೆಯನ್ನು ಮಾಡಿದ್ದರೆ, ಅದು ನಮಗೆ ಆದಂತೆಯೇ ಲೋಕಕ್ಕೆಲ್ಲ ಮೆಚ್ಚಿಕೆಯಾಗಬೇಕೆಂದು ಕಂಡಕಂಡವರ ಮುಂದೆಲ್ಲಾ ಹೇಳಿಕೊಳ್ಳುತ್ತೇವೆ. ಅವರೆಲ್ಲರೂ ತಮ್ಮ ತಮ್ಮ ಮಕ್ಕಳ ಜಾಣತನವನ್ನು ನಮ್ಮಲ್ಲಿ ಕೊಂಡಾಡ ಹೊರಟರೆ ಅದನ್ನು ಕೇಳುವಷ್ಟು ತಾಳ್ಮೆ ನಮಗೆ ಇರುವುದಿಲ್ಲ. ಅದನ್ನು ಬೈರಿಗೆ (ಬೋರಿಂಗ್) ಎನ್ನುತ್ತೇವೆ. ನಮ್ಮದು ದೊಡ್ಡದು; ನಮ್ಮ ಮಗು ಎಲ್ಲರ ಮಕ್ಕಳಂತೆಯೂ ಅಲ್ಲ—ಎಂಬ ಒಂದು ಭ್ರಾಂತಿ ನಮ್ಮ ಜೀವ ಗುಹೆಯ ಮುಸಕನಲ್ಲಿ ಅವಿತುಕೊಂಡಿರುತ್ತದೆ.

ಇದರಂತೆಯೇ ನಾವು ಇತರರಂತೆ ಅಲ್ಲವೆಂಬ ಭ್ರಾಂತಿಯು ಲೋಕವಾರ್ತಾವಿಮರ್ಶನೆಯ ರೂಪವನ್ನು ತಾಳುತ್ತದೆ. ಲೌಕಿಕ ಜೀವನದಲ್ಲಿ ಪ್ರತಿಯೊಬ್ಬ ಮನುಷ್ಯನೂ ಅವರನ್ನಿವರನ್ನು ಕುರಿತು ಮಾತನಾಡಬೇಕಾದ ಸಂದರ್ಭ ಬರುತ್ತದೆ. ಹೀಗೆ ತಾನಾಗಿ ಒದಗಿಬರುವ ಸಂದರ್ಭದ ಜೊತೆಗೆ ಕೆಲವರು ತಾವಾಗಿ ಅಂಥ ಸಂದರ್ಭಗಳನ್ನು ಕಲ್ಪಿಸಿಕೊಳ್ಳುತ್ತಲೂ ಇರುತ್ತಾರೆ. ಇಂಥ ಸಂದರ್ಭಗಳಲ್ಲಿ ಪರರ ಗುಣದೋಷವಿಮರ್ಶೆ ಬಹು ಹುರುಪಿನಿಂದ ನಡೆಯುತ್ತದೆ. ಚಿನ್ನದ ವ್ಯಾಪಾರಿ ಒಡವೆಯನ್ನು ತ್ರಾಸಿನಲ್ಲಿ ತೂಗಿಸಿ ನೋಡುವಂತೆ ನಾವು ಇತರರ ಯೋಗ್ಯತೆಯನ್ನು ತಕ್ಕಡಿಯಲ್ಲಿ ಇಡುತ್ತೇವೆ. ಆಗ ಇನ್ನಾರಾದರೂ ಮತ್ತೊಬ್ಬರ ವಿಷಯದಲ್ಲಿ ನಿಮಗೇಕೆ ಇಷ್ಟು ಆದರ? ಎಂದು ಕೇಳಿದರೆ, ಇಂಥ ಗುಣದೋಷ ವಿಮರ್ಶೆ ಲೋಕಹಿತಕ್ಕೋಸ್ಕರ

ಎಂದು ಹೇಳುತ್ತೇವೆ. ಮತ್ತೊಬ್ಬರ ದೊಡ್ಡತನವನ್ನು ಇಳಿಸು ವುದರಿಂದ ನಮ್ಮ ಜೀವಕ್ಕೆ ಏನೋ ಒಂದು ಸಮಾಧಾನ ವಾಗುತ್ತದೆಂಬದನ್ನು ನಾವು ಒಪ್ಪಿಕೊಳ್ಳಲು ಹಿಂಜರಿಯುತ್ತೇವೆ. ಹಾಗೆಯೇ, ಇತರರ ಗುಣ ನಿರ್ಣಯಮಾಡಲು ನಮಗೆ ಅಧಿಕಾರ ಕೊಟ್ಟವರಾರೆಂದು ನಮ್ಮನ್ನು ನಾವೇ ಕೇಳಿಕೊಳ್ಳಬೇಕಾ ದದ್ದನ್ನು ಮರೆಯುತ್ತೇವೆ. ಸಾಮಾನ್ಯವಾಗಿ ಸಾರ್ವಜನಿಕ ಜೀವನಕ್ಕೆ ಬರುವವರು, ವಿಧಿ ಅವರ ಕೈಗೆ ಅಧಿಕಾರ ನಿರೂಪ ಕೊಟ್ಟು—"ನೀನು ಹೋಗಿ ಲೋಕವನ್ನುದ್ಧಾರಮಾಡಿ ಬಾ" ಎಂದು ಹೇಳಿತೋ ಎಂಬಂತೆ ನಡೆಯುತ್ತಾರೆ. ಇಂಥ ಆತ್ಮ ವಿಶ್ವಾಸವಿಲ್ಲದಿದ್ದರೆ ಅವರ ಕಾರ್ಯವು ಉತ್ಸಾಹದಿಂದ ಸಾಗ ಲಾರದು. ಆದರೆ, ಅದೇ ಆತ್ಮವಿಶ್ವಾಸವು ಜಾಗರೂಕತೆ ತಪ್ಪಿ ದರೆ ಆತ್ಮಪ್ರತಿಷ್ಠಾರೂಪವಾದ ಅನ್ಯಾಯ ಕಾರಣವಾಗುತ್ತದೆ. ಸಾರ್ವಜನಿಕ ಜೀವನದಲ್ಲಿ ಇತರರ ಗುಣದೋಷ ವಿಮರ್ಶೆಯ ಜವಾಬ್ದಾರಿ ಕೊಂಚ ಮಾತ್ರವಾದರೂ ಪ್ರತಿಯೊಬ್ಬನಿಗೂ ನಿರ್ಬಂಧವಾಗಿ ಇದ್ದೇ ಇರುತ್ತದೆ. ಆದರೆ, ಎಷ್ಟು ಮಾತ್ರ ನಿರ್ಬಂಧವೋ ಅದನ್ನು ಮೀರದೆ,—ನಿರ್ಬಂಧವಾಗಿರುವಷ್ಟು ಮಾತ್ರ,—ನಿಜವಾಗಿ ಕರ್ತವ್ಯವಾದಷ್ಟು ಮಾತ್ರವೇ,—ಇತರರ ಯೋಗ್ಯತೆಯನ್ನು ಕುರಿತು ಮಾತನಾಡುವ ಜಾಗರೂಕತೆ ಸುಸಂಸ್ಕೃತನದು. ಮತ್ತು ಆ ಕರ್ತವ್ಯದಲ್ಲಿ ಸತ್ಯಲೋಪ ವಾಗದಂತೆ ಕಾಠಿನ್ಯವನ್ನು ಎಷ್ಟು ಮಟ್ಟಿಗೆ ತಗ್ಗಿಸಿ ಸೌಮ್ಯ ಗೊಳಿಸುವುದು ಸಾಧ್ಯವೋ ಅಷ್ಟು ಮಟ್ಟಿಗೆ ಸೌಮ್ಯನಾಗಿರುವ ಜಾಗರೂಕತೆ ಸುಸಂಸ್ಕೃತನದು.

ಪ್ರಜಾರಾಜ್ಯದಲ್ಲಿ—ಜನಸ್ವಯಂವರಣದಿಂದ ದೇಶಪ್ರತಿನಿಧಿ ಯೆನ್ನಿಸಿಕೊಂಡವನಿಗೆ ಶಾಸನಾಧಿಕಾರವಿರತಕ್ಕದ್ದೆಂಬ ವ್ಯವಸ್ಥೆ ಯಲ್ಲಿ—ಸ್ವಾಹಂಕಾರವರ್ಜನೆಯ ರೂಪದ ಸಂಸ್ಕೃತಿಗೆ

ಪ್ರೋತ್ಸಾಹ ದೊರೆಯಲಾರದು. ತನ್ನ ಪ್ರಜ್ಞೆ ಕೊಂಚದ್ದು, ತನ್ನ ಶಕ್ತಿ ಮಿತವಾದದ್ದು ಎಂದುಕೊಂಡು ಹಿಂದೆ ಹಿಂದೆ ನಿಲ್ಲು ವವನಿಗೆ ಯಾರೂ ಮುಂದುಗಡೆ ಜಾಗಕೊಡರು. ನುಗ್ಗಿ, ತಳ್ಳಿ, ಮೊಣಕೈಯಾಡಿಸಿ ಮುಂದೆ ಬರುವವನಿಗೇ ಪ್ರಜಾರಾಜ್ಯದಲ್ಲಿ ಒಂದು ಕಾರ್ಯಾವಕಾಶ. ಈ ಪ್ರಜಾರಾಜಕೀಯವು ಮನುಷ್ಯ ಸ್ವಭಾವದಲ್ಲಿ ನವುರುಗಳನ್ನು ಅಳಿಸಿಹಾಕಿ ಒರಟುಮಾಡುತ್ತದೆ.

ಹೀಗೆ ಸ್ವಾರ್ಥವೆಂಬುದು ನಮ್ಮ ಸ್ವಭಾವದಲ್ಲಿ ನಾನಾ ಪ್ರಕಾರವಾಗಿ ಕೆಲಸಮಾಡುತ್ತದೆ. ಗೂಢವಾಗಿ, ಪ್ರಕಟವಾಗಿ, ನೇರವಾಗಿ, ವಕ್ರವಾಗಿ, ಪ್ರತ್ಯಕ್ಷವಾಗಿ, ಪರೋಕ್ಷವಾಗಿ— ಹೇಗೋ ಅದು ಸಂತತವಾಗಿ ಕೆಲಸಮಾಡುತ್ತಿರುತ್ತದೆ. ಅದು ಎಲ್ಲ ಸಂದರ್ಭಗಳಲ್ಲಿಯೂ ದುಷ್ಟವೆಂದೂ ಹೇಳಲಾಗದು. ಅದು ಅನ್ಯಾಯಕಾರಿಯಾಗುವ ಸಂಭವಗಳಿರುವಂತೆ ನ್ಯಾಯವಿಹಿತ ವಾಗಿರುವ ಸಂದರ್ಭಗಳೂ ಎಷ್ಟೋ ಇರುತ್ತವೆ. ಆದದ್ದರಿಂದ ಇಲ್ಲಿ ಈಗ ನಾವು ಬಯಸಬೇಕಾದದ್ದು ಸ್ವಾರ್ಥದ ಸಂಪೂರ್ಣ ನಾಶವನ್ನಲ್ಲ, ಸಂಪೂರ್ಣ ನಿಗ್ರಹವನ್ನಲ್ಲ, ನಿಯಮನ ಮಾತ್ರ ವನ್ನು. ಸ್ವಾರ್ಥವನ್ನು ತಿದ್ದಬೇಕು. ಸ್ವಾರ್ಥವಿದ್ದರೆ ಇರಲಿ; ಆದರೆ ಮಿತಿಯಲ್ಲಿರಲಿ. ಅದು ಕೆಲಸಮಾಡಲಿ; ಆದರೆ ಹದ್ದಿನಲ್ಲಿ ಕೆಲಸಮಾಡಲಿ. ಅದರ ಮಾರ್ಗಗತಿಗಳನ್ನು ಧರ್ಮತತ್ತ್ವವು ಗೊತ್ತುಪಡಿಸಲಿ.

## (೪) ಸಮನ್ವಯ ದೃಷ್ಟಿ

ಸಮನ್ವಯವೆಂದರೆ ಅನುಗೂಡಿರುವುದು. ನಮ್ಮ ವಿಚಾರಕ್ಕೆ ಬರುವ ಪ್ರತಿಯೊಂದು ಪ್ರಶ್ನೆಯಲ್ಲಿಯೂ ಭಿನ್ನಾಭಿಪ್ರಾಯಗಳು ಕಾಣಬರುವುದು ಎಲ್ಲರ ಅನುಭವ. ಹಾಗೆ ಅಭಿಪ್ರಾಯಭೇದ ಗಳು ತಲೆದೋರಿದಾಗ ಅವುಗಳ ಕಾರಣದಿಂದ ನಮ್ಮ ಅನ್ಯೋನ್ಯ

ಸ್ನೇಹಕ್ಕೂ ಸಮಾಜದ ಐಕಮತ್ಯಕ್ಕೂ ಹಾನಿಬಾರದಿರಬೇಕಾದರೆ, ಆ ನಾನಾ ಅಭಿಪ್ರಾಯಗಳನ್ನು ಪರೀಕ್ಷಿಸಿ ನೋಡಿ, ಅವುಗಳ ಸತ್ಯಾಂಶಗಳನ್ನು ಶೇಖರಮಾಡಿ, ಒಂದು ಹದದಲ್ಲಿ ಅವುಗಳನ್ನು ಹೊಂದಿಸಬೇಕು. ಅಂಥಾ ಹದದ ಹೊಂದಿಕೆಯೇ ಸಮನ್ವಯ. ಇದು ಪರತತ್ತ್ವವಿಚಾರದಲ್ಲಿ ಅವಶ್ಯವೆಂಬುದನ್ನು ಭಗವಾನ್ ವೇದವ್ಯಾಸರು ಅಪ್ಪಣೆಕೊಡಿಸಿದ್ದಾರೆ. ಆ ಸಮನ್ವಯ ನೀತಿ ರಾಜಕೀಯಕ್ಕೂ ಸಂಪದ್ವಿಷಯಕ್ಕೂ ನ್ಯಾಯಸ್ಥಾನದ ವ್ಯವಹಾರಕ್ಕೂ ಎಲ್ಲ ಮನುಷ್ಯವ್ಯಾಪಾರಗಳಿಗೂ ಅನ್ವಯಿಸಲರ್ಹವಾದದ್ದು. ಯಾವ ಒಂದು ಮತದಲ್ಲಿಯೂ ಸತ್ಯಸರ್ವಸ್ವವಿಲ್ಲ; ಯಾವ ಒಂದು ಪಂಥದಲ್ಲಿಯೂ ಗುಣಸರ್ವಸ್ವವಿಲ್ಲ. ಪ್ರತಿಯೊಂದು ವಾದವನ್ನೂ ನಾವು ಸಾವಧಾನ ಸಹಾನುಭೂತಿಗಳಿಂದ ಪರೀಕ್ಷಿಸಿ ನೋಡಬೇಕು; ಅದರಿಂದ ಗೊತ್ತಾಗುವ ಗುಣಭಾಗವನ್ನು ಅಷ್ಟನ್ನೋ ಇಷ್ಟನ್ನೋ ಇತರ ವಾದಗಳ ಗುಣಭಾಗಗಳೊಡನೆ ಹದವರಿತು ಕೂಡಿಸಬೇಕು. ಮನುಷ್ಯತ್ವವು ಅದಕ್ಕೆ ಸಾಧ್ಯವಿರುವಷ್ಟು ಮೇಲ್ಮಟ್ಟಕ್ಕೇರಲು ಇಂಥಾ ಸಮನ್ವಯೋಪಾಯವೊಂದೇ ಇರುವ ಮಾರ್ಗ. ಮನುಷ್ಯನಿಗೆ ಸ್ವೈಜವಾಗಿರುವ ಸ್ವಾರ್ಥಗಳಲ್ಲಿ ಸ್ವಮತಾಭಿಮಾನವೂ ಒಂದು. ಸ್ವಮತವೆಂದರೆ ನಾವು ಗುರುಹಿರಿಯರಿಂದ ಅಥವಾ ಸುತ್ತಮುತ್ತಲಿನ ಸಮಾಜದಿಂದ ಪಡೆದುಕೊಂಡಿರುವ ಅಭಿಪ್ರಾಯಗಳು ಮಾತ್ರವೇ ಅಲ್ಲ; ಅವು ನಮ್ಮ ಧರ್ಮಾಚರಣೆಗೆ ಸಂಬಂಧಪಟ್ಟ ಅಭಿಪ್ರಾಯಗಳು ಮಾತ್ರವೇ ಅಲ್ಲ; ಎಲ್ಲ ವಿಚಾರಗಳನ್ನೂ ಕುರಿತ ಎಲ್ಲ ನಿರ್ಣಯಗಳನ್ನೂ ಇಲ್ಲಿ ಸ್ವಮತವೆಂಬ ಪದ ಸೂಚಿಸುತ್ತದೆ. ಈ ಸ್ವಾಭಿಪ್ರಾಯದ ಮೇಲಣ ಅಭಿಮಾನ ಎಲ್ಲ ಹಟಗಳಿಗೂ ಎಲ್ಲ ಕಲಹಗಳಿಗೂ ಮೂಲವಾದದ್ದು. ನಾವು ಎಷ್ಟೋ ಸಾರಿ ಸ್ನೇಹಿತರೊಡನೆ ಮಾತನಾಡುವಾಗ "ಈ ಮಾತನ್ನು

ನಾನು ಆ ಹೊತ್ತೇ ಹೇಳಿರಲಿಲ್ಲವೆ?" ಎನ್ನುತ್ತೇವೆ. "ಮೊದಲಿನಿಂದ ನಾನು ಹೀಗೆಯೇ ಹೇಳುತ್ತಿದ್ದೇನಲ್ಲ!" ಎನ್ನುತ್ತೇವೆ. ನಮ್ಮ ಸ್ವಂತ ಬುದ್ಧಿಸಂತಾನದಲ್ಲಿ ನಮಗೆ ಅಷ್ಟು ನಂಬಿಕೆ. ಎಷ್ಟೋಮಂದಿ ಲೋಕಬೋಧಕರೆಂದೆನಿಸಿಕೊಂಡಿರುವವರಿಗೂ ಜನನಾಯಕರೆನಿಸಿಕೊಂಡಿರುವವರಿಗೂ ತಮ್ಮ ಔರಸಪುತ್ರರ ಮೇಲಿರುವುದಕ್ಕಿಂತ ತಮ್ಮ ತಮ್ಮ ಮಾನಸ ಪುತ್ರರ ಮೇಲೆ ಹೆಚ್ಚು ವ್ಯಾಮೋಹವಿರುತ್ತದೆ. ಈ ವ್ಯಾಮೋಹವೇ ಎಲ್ಲ ಪಾಷಂಡವಾದಗಳಿಗೂ ಮೂಲ.

## ಏಕಪಕ್ಷದೃಷ್ಟಿ ಸರಿಯಲ್ಲ

ಹಲವು ವರ್ಷಗಳ ಹಿಂದೆ ಉತ್ತರದೇಶದಲ್ಲಿ ಲವಣಾನಂದ ಸ್ವಾಮಿಗಳೆಂಬವರು ಒಬ್ಬರಿದ್ದರು. ಅವರ ವಾದವೇನೆಂದರೆ,— "ಉಪ್ಪೊಂದೇ ಲೋಕದಲ್ಲಿ ಸಂಜೀವನಿ; ಉಪ್ಪು ತಿನ್ನುತ್ತಿದ್ದರೆ ಎಲ್ಲ ವ್ಯಾಧಿಗಳೂ ವಾಸಿಯಾಗುತ್ತವೆ; ಬೇರೆ ಯಾವ ಔಷಧವೂ ಕೆಲಸಕ್ಕೆ ಬಾರದು" ಎಂಬುದು. ಹಾಗೆಯೇ ರಾಮ ಭಕ್ತರು ಕೆಲವರಿರುತ್ತಾರೆ. ನೀವು ಯಾವ ತಪ್ಪುಮಾಡಿರಲಿ, ನಿಮಗೆ ಏನು ಬೇಕಾಗಿರಲಿ, 'ರಾ'—'ಮ' ಈ ಎರಡು ಅಕ್ಷರಗಳನ್ನು ನುಡಿದುಬಿಟ್ಟರೆ—ಕಡೆಗೆ 'ರಾ' ಆದಮೇಲೆ 'ಮ' ಎಂಬುದನ್ನು ಪೂರ್ತಿ ನುಡಿಯದೆ 'ಮ್' ಎಂಬ ಅರ್ಧಾಕ್ಷರವನ್ನು ನುಡಿದರೂ ಸಹ—ಎಲ್ಲ ದುಃಖಗಳೂ ತೊಲಗಿ ಎಲ್ಲ ಇಷ್ಟಗಳೂ ಕೈಗೂಡುತ್ತವೆ. ಹೀಗೆಂದು ರಾಮನಾಮೋಪಾಸಕರ ವಾದ. ಅಂಥಾ ಕವಿಯೊಬ್ಬ ಹೀಗೆ ಹೇಳಿದ್ದಾನೆ:—

ವನೇ ಚರಾಮೋ ವಸುಚಾಹರಾಮಃ |
ನದೀಂ ತರಾಮೋ ನಭಯಂ ಸ್ಮರಾಮಃ ||
ಇತೀರಯಂತೋಪಿ ವನೇ ಕಿರಾತಾಃ |
ಮುಕ್ತಿಂಗತಾ ರಾಮಪದಾನುಷಂಗಾತ್ ||

[ಕಾಡಿನಲ್ಲಿ ಬೇಡರು ಹೀಗೆ ಹೇಳಿಕೊಂಡು ಹೋಗುತ್ತಿದ್ದರು:—''ಅಡವಿಯಲ್ಲಿ (ಚರಾಮಃ) ತಿರುಗಾಡುತ್ತಿರೋಣ ; ಸಿಕ್ಕಿದ ಪ್ರಯಾಣಿಕರ ಒಡವೆ ವಸ್ತ್ರಗಳನ್ನು (ಆಹರಾಮಃ) ಅಪಹರಿಸೋಣ ; ಆಮೇಲೆ ನದಿಯನ್ನು (ತರಾಮಃ) ದಾಟಿಬಿಡೋಣ. ಆಗ ನಮಗೆ ಭಯದ (ಸ್ಮರಾಮಃ) ಚಿಂತೆ ಬೇಕಿಲ್ಲ. ಹೀಗೆಂದು ಹೇಳುತ್ತಾ ನಡೆದಾಗ ರಾಮ ರಾಮ ಎಂಬ ಪದ ಬಾಯಲ್ಲಿ ನುಡಿಯುತ್ತಿದ್ದ ಕಾರಣ ಅವರಿಗೆ ಮುಕ್ತಿ ದೊರೆಯಿತು.]

ಇದು ರಾಮಭಕ್ತಿಯ ಅತಿರೇಕ. ಈ ಪದ್ಯವನ್ನು ಕೇವಲ ಶಬ್ದಚಮತ್ಕಾರದ ದೃಷ್ಟಿಯಿಂದ ಮೆಚ್ಚಿಕೊಳ್ಳಬೇಕಾದದ್ದೇ ಸರಿ. ಆದರೆ, ಮುಕ್ತಿಗೆ ನಿರ್ವಿಚಾರಭಕ್ತಿಯಷ್ಟೇ ಸಾಲುತ್ತದೆಯೆ ? ಬುದ್ಧಿಯ ವಿಚಾರವೂ ತದನುಸಾರಿಯಾದ ಜೀವವರ್ತನೆಯೂ ಅಲ್ಲಿ ಸೇರಬೇಡವೆ ?

ಲವಣಾನಂದರ ಲವಣವಿಶ್ವಾಸ, ರಾಮಭಕ್ತನ ನಾಮಮಹಿಮಾವಿಶ್ವಾಸ—ಇವುಗಳಂಥವೇ ನಮ್ಮ ಅನೇಕ ರಾಜಕೀಯದ ಮತ್ತು ಸಮಾಜಸುಧಾರಣೆಯ ಹಿಡಿನುಡಿಗಳು. 'ಅಹಿಂಸೆಯೇ ಅಜೇಯಾಸ್ತ್ರ'; 'ಖಾದಿಯನ್ನು ಬಿಟ್ಟರೆ ಹಾದಿಯಿಲ್ಲ'; 'ಸರ್ವಸಮತೆಯೇ ಸರ್ವಸೌಖ್ಯ'; 'ನಿರ್ಬಂಧದ ವ್ಯವಸ್ಥೆಗಿಂತ ಸ್ವಾತಂತ್ರ್ಯದ ಅನಾಯಕವಿರಲಿ'; 'ಯಂತ್ರ ಕಾರ್ಯ ಬೇಡದವರಿಗೆ ಶಂಖವಾದ್ಯ ಸಿದ್ಧ'—ಇಂಥ ನೂರಾರು ಪ್ರಚಾರಘೋಷಣೆಗಳು ನಮ್ಮ ಕಾಲದ ವಾತಾವರಣವನ್ನು ಆದಿರಿಸುತ್ತವೆ. ಇವುಗಳಲ್ಲಿ ಒಂದೊಂದರಲ್ಲೂ ಅಷ್ಟಿಷ್ಟು ಸತ್ಯಾಂಶವಿರಬಹುದು—ಲವಣದಲ್ಲಿ ಪ್ರಯೋಜನಾಂಶವಿಲ್ಲವೆ ? ರಾಮಧ್ಯಾನದಲ್ಲಿ ಗುಣಾಂಶವಿಲ್ಲವೆ ? ಆದರೆ ಈ ಮಿತವಾಗಿರುವ ಗುಣಾಂಶಗಳ ಜೊತೆಗೆ ಅಧಿಕವಾದ ಅವಗುಣಾಂಶಗಳೂ ಅಂಟಿಕೊಂಡಿರುತ್ತವೆ. ಎಲ್ಲ ಮನುಷ್ಯಭಾವನೆಗಳಲ್ಲಿಯೂ ಪ್ರಮಾದ ದೋಷಗಳು ಅನಿವಾರ್ಯವಾಗಿರುತ್ತವೆ. ಬಹುಮುಖವಾದ

ಪರೀಕ್ಷೆಯೊಂದರಿಂದಲೇ ಆ ಪ್ರಮಾದಗಳನ್ನು ಕಳೆಯುವುದು ಸಾಧ್ಯ. ಮಹಾತ್ಮಾ ಗಾಂಧಿಯವರ ವಾಕ್ಯವೇ ಆಗಲಿ, ಜನಾಬ್ ಜಿನ್ನಾ ಸಾಹೇಬರವರ ವಾಕ್ಯವೇ ಆಗಲಿ, ಎಂಥ ಮಹನೀಯರ ಅಭಿಪ್ರಾಯವೇ ಆಗಲಿ, ಅದು ಸ್ವತಂತ್ರ ತರ್ಕಕ್ಕೆ ಒಳಪಟ್ಟಲ್ಲದೆ ಶುದ್ಧಿಯಾಗಲಾರದು. ಎಂಥ ಗಣಿಯಿಂದ ಬಂದ ಚಿನ್ನವಾದರೂ ಅದನ್ನು ಪುಟಕ್ಕೆ ಹಾಕಿದಲ್ಲದೆ ಅದು ಅಪರಂಜಿ ಯಾಗಲಾರದು.

ಮನುಮಹರ್ಷಿಗಳು ಋಷಿವಾಕ್ಯದ ವಿಷಯದಲ್ಲಿಯೇ ಹೀಗೆ ಹೇಳಿದ್ದಾರೆ:—

ಆರ್ಷಂ ಧರ್ಮೋಪದೇಶಂ ಚ
ವೇದಶಾಸ್ತ್ರಾವಿರೋಧಿನಾ
ಯಸ್ತರ್ಕೇಣಾನುಸಂಧತ್ತೇ
ಸಧರ್ಮಂ ವೇದ ನೇತರಃ

[ಯಾವ ಋುಷ್ಯುಪದೇಶವು ಸುತರ್ಕದ ಜಲ್ಲಡಿಯಿಂದ ಶೋಧಿಸಿದ ಬಳಿಕ ಗಟ್ಟಿಕಾಳಾಗಿ ನಿಲ್ಲುತ್ತದೆಯೋ ಅದೇ ಧರ್ಮ; ಮಿಕ್ಕದ್ದಲ್ಲ.]

ಈ ಅಭಿಪ್ರಾಯವನ್ನೇ ಪ್ರಖ್ಯಾತ ವ್ಯಾಖ್ಯಾತರಾದ ಕುಲ್ಲೂಕಭಟ್ಟರು ಪ್ರಾಚೀನೋಕ್ತಿಯಿಂದ ಸಮರ್ಥಿಸಿದ್ದಾರೆ:—

ಧರ್ಮೇ ಪ್ರಮೀಯಮಾಣೇ ಹಿ
ವೇದೇನ ಕರಣಾತ್ಮನಾ
ಇತಿಕರ್ತವ್ಯತಾ ಭಾಗಂ
ಮೀಮಾಂಸಾ ಪೂರಯಿಷ್ಯತಿ || ಮನು. ೧೨—೧೦೬.

ಕೇವಲಂ ಶಾಸ್ತ್ರಮಾಶ್ರಿತ್ಯ
ನ ಕರ್ತವ್ಯೋ ವಿನಿರ್ಣಯಃ |
ಯುಕ್ತಿಹೀನ ವಿಚಾರೇತು
ಧರ್ಮಹಾನಿಃ ಪ್ರಜಾಯತೇ || ಮನು. ೧೨—೧೧೩.

ವೇದ ವಿಚಾರದಲ್ಲಿಯೇ ತರ್ಕಾವಶ್ಯಕತೆ ಹೀಗಿರುವಾಗ, ಮನುಷ್ಯಾಭಿಪ್ರಾಯಗಳ ವಿಷಯದಲ್ಲಿ ಹೇಳತಕ್ಕದ್ದೇನು? ಆದರೂ, ನಮ್ಮ ಕಾಲದಲ್ಲಿ ಪ್ರಚಾರಸೌಕರ್ಯಗಳು ಜಗತ್ತಿನಲ್ಲಿ ಹಿಂದೆ ಎಂದೂ ಇಲ್ಲದಿದ್ದಷ್ಟು ಅತಿಶಯವಾಗಿವೆ. ಅಚ್ಚಿನ ಯಂತ್ರಗಳು ಹೇರಳವಾಗಿವೆ; ಕಾಗದ ಅಗ್ಗವಾಗಿದೆ; ಸಭೆ ಸೇರಿಸುವುದು ಸುಲಭವಾಗಿದೆ; ಪತ್ರಿಕೆಗಳೂ ವೇದಿಕೆಗಳೂ ವಿಷಯಗಳನ್ನು ಚರ್ಚಿಸುವೆವೆಂದು ಹೊರಟು ಬುದ್ಧಿಯನ್ನೆಚ್ಚರಿಸುವುದಕ್ಕಿಂತ ಗದ್ದಲವನ್ನೆಬ್ಬಿಸುವುದು ಹೆಚ್ಚಾಗಿದೆ. ರಾಮಕೀರ್ತನೆ ಕಿವಿಗೆ ಇಂಪು, ರಾಮನ ವನವಾಸ ಊಹೆಗೂ ಸಹ್ಯವಲ್ಲ. ಆದದ್ದರಿಂದ ಜನವು ಸುಲಭವಾದ ರಾಮಭಜನೆಗೆ ಹೋಗುತ್ತದೆ; ರಾಮನ ದೃಢಪ್ರತಿಜ್ಞೆಯನ್ನು ಜ್ಞಾಪಕಕ್ಕೂ ತಂದುಕೊಳ್ಳುವುದಿಲ್ಲ. ಯಾವುದು ಸುಲಭವೋ ಅದನ್ನು ಗ್ರಹಿಸುವುದು ಸ್ವಾಭಾವಿಕ. ಪತ್ರಿಕೆಗಳೂ ಜನನಾಯಕರೂ ತಮ್ಮ ತಮ್ಮ ಬುದ್ಧಿಯ ತಯಾರಿಕೆಗಳನ್ನು ತರಣೋಪಾಯದ ಗುಳಿಗೆಗಳನ್ನಾಗಿ ಮಾಡಿ, ಆಕರ್ಷಕವಾದ ಡಬ್ಬಿಗಳಲ್ಲಿ ಜನರಿಗೆ ಹಂಚುತ್ತಾರೆ. ಈ ಗುಳಿಗೆಗಳನ್ನು ನುಂಗುವುದು ಜನಕ್ಕೆ ಸುಲಭ. ಅವುಗಳಲ್ಲಿ ಏನಿದೆ ಎಂದು ಪರೀಕ್ಷಿಸುವುದು ಪ್ರಯಾಸ. ಯಾವುದು ಸುಲಭವೋ ಅದನ್ನು ಜನ ಮಾಡುತ್ತದೆ. ಹೀಗೆ ಲೋಕದಲ್ಲಿ ಪಾಷಂಡ ವ್ರತಗಳೂ ಅತಿವಾದಗಳೂ ಬೆಳೆದಿವೆ. ಇದರಿಂದಲೇ ನಾನಾ ಜನವರ್ಗಗಳಲ್ಲಿ ಪರಸ್ಪರ ಅಸೂಯೆ; ದೇಶದೇಶಾಂತರಗಳಿಗೆ ದ್ವೇಷ; ಇದರಿಂದ ಜಾತಿಮಾತ್ಸರ್ಯ, ಜನಜನಾಂಗಯುದ್ಧ.

ಅಭಿಪ್ರಾಯವಿಚಾರದಲ್ಲಿ ಹಟ ಅಸಂಗತವೆನ್ನಲು ಕಾರಣಗಳನ್ನು ಮೇಲೆ ಒಂದುಕಡೆ ಸೂಚಿಸಿದ್ದಾಗಿದೆ. ಸತ್ಯ ಸಾವಿರ ರೂಪವುಳ್ಳದ್ದು. ಅದನ್ನು ವ್ಯವಹಾರಸಂದರ್ಭಕ್ಕೆ ಹೊಂದಿಸಬೇಕಾದ ನಯವಿವೇಕಗಳೂ ಹತ್ತು ಸಾವಿರ ತೀರಿನವು. ಹೀಗಿರು

ವಲ್ಲಿ ಒಂದು ಪ್ರಶ್ನೆಗೆ ಒಂದೇ ಉತ್ತರವೆಂದು ಹಟಹಿಡಿಯುವುದು ಸತ್ಯಕ್ಕೆ ಒಪ್ಪಿತವಾಗದು. ಒಂದೂರಿನಿಂದ ಇನ್ನೊಂದೂರಿಗೆ ಹೋಗಲು, ಆಕಾಶದಲ್ಲಿ ಕಾಗೆ ಹಾರುವ ದಾರಿಯಂತೆ ನೆಲದ ಮೇಲೆ ನೇರವಾದ ದಾರಿ ಇರುವುದು ಅಸಂಭವ. ನೇರವಾದ ದಾರಿ ತಿಟ್ಟು ಹಳ್ಳಗಳಿಂದ ಕೂಡಿದ್ದಾಗಿ ದುರ್ಗಮವಾಗಿರ ಬಹುದು. ಬಳಸುದಾರಿ ಅದಕ್ಕಿಂತ ಸಮವಾಗಿ ಸುಗಮವಾಗಿರ ಬಹುದು. ನೇರವಾದ ದಾರಿ ನೋಟದ ಮಟ್ಟಿಗೆ ಹತ್ತಿರವಾಗಿ. ನಡಿಗೆಗೆ ಹಾಗಲ್ಲದೆ ಇರುವುದುಂಟು. ಬಳಸುದಾರಿ ಕಣ್ಣಿಗೆ ದೂರವೂ ಕಾಲಿಗೆ ಹತ್ತಿರವೂ ಆಗಿರುವುದುಂಟು. ಹೀಗಿರುವು ದರಿಂದ ಮೈಸೂರಿನಿಂದ ಬೆಂಗಳೂರಿಗೆ ಬಹು ಹತ್ತಿರವಾದ ದಾರಿ ಯಾವುದೆಂದು ಯಾರಾದರೂ ಕೇಳಿದರೆ,—"ಯಾರಿಗೆ"?— "ಎಂಥ ವಾಹನದಲ್ಲಿ"?—ಎಂಬ ಸಂಗತಿಗಳಿಗನುಸಾರವಾಗಿ ಎರಡೋ ಮೂರೋ ಉತ್ತರಗಳನ್ನು ಕೊಡಬೇಕಾಗುತ್ತದೆ. ಒಂದೊಂದು ಸಂಗತಿಯ ವಿವರಣಾಂಶಗಳಿಗೆ ಅನುಸಾರವಾಗಿ ಒಂದೊಂದು ಉತ್ತರ ನಿಜ. ಎಲ್ಲ ಮಾನುಷವಿಚಾರಗಳಲ್ಲೂ ಹೀಗೆ 'ಇದಮಿತ್ಥಂ' ಎಂದು ಖಂಡಿತ ಹೇಳುವುದು ಸಾಧ್ಯವೇ ಇಲ್ಲ. ಹಾಗಾದರೆ, ಅಂಥ ಭಿನ್ನಾಭಿಪ್ರಾಯಗಳಿರುವ ಕಡೆ ಪ್ರತಿ ಯೊಬ್ಬರೂ ತಮ್ಮ ತಮ್ಮ ಅಭಿಪ್ರಾಯವನ್ನು ಕೂಡಿದ ಮಟ್ಟಿಗೂ ಸಾಮನೀತಿಯ ಧ್ವನಿಯಲ್ಲಿ—ಸಮಜಾಯಿಷಿ ರೀತಿ ಯಲ್ಲಿ—ಮೇಲೆ ಹೇಳಿದಂತೆ ಸ್ಯಾನ್ಮರ್ಯಾದೆಯಲ್ಲಿ—ಹೇಳಿದರೆ ನಾನಾ ಮತಗಳ ವಿವಾದಾಂಶಗಳು ಕಡಮೆಯಾಗಿ, ಸಮ್ಮತಿಯ ಅಂಶಗಳು ಹೆಚ್ಚುತ್ತವೆ. ಈ ಹೊತ್ತಿನ ಪ್ರಪಂಚದಲ್ಲಿ ಈ ಪ್ರತಿ ಪಾದನ ಸೌಮ್ಯತೆ ಇಲ್ಲದೆಹೋಗಿದೆ. ಎಲ್ಲ ಜನರೂ ಯಾವು ದಾದರೂ ಒಂದು ಪಕ್ಷವನ್ನು ಹಿಡಿದವರೇ ಆಗಿ, ಉಗ್ರಪಂಥ ವನ್ನೇ ಅವಲಂಬಿಸಿರುತ್ತಾರೆ. ಈ ಮತಪಾಷಂಡಿತ್ವಗಳೇ, ಈ

ವಾದ ಮಹೋಗ್ರತೆಗಳೇ, ಜಗತ್ತಿನ ಇಂದಿನ ಸಂಕ್ಷೋಭೆಗೆ ಮೂಲಕಾರಣಗಳು. ಆ ಉಗ್ರತೆಗಳನ್ನು ಜಗತ್ತು ನೀಗಿ ಸ್ನೇಹ ಪರವಾಗಬೇಕಾದರೆ ಸಾಮಮರ್ಯಾದೆಯನ್ನು ಕಲಿಸುವ ಸಂಸ್ಕೃತಿ ಜನದಲ್ಲಿ ಹರಡಬೇಕು.

ಮನುಷ್ಯಜೀವನವು ಗಂಗಾ ಬ್ರಹ್ಮಪುತ್ರಾದಿ ನದಿಗಳ ಸಂಗಮಸ್ಥಾನಗಳಂತೆ ನೂರಾರು ಶಕ್ತಿಗಳ ಮತ್ತು ನೂರಾರು ವೇಗಗಳ ಅನ್ಯೋನ್ಯ ಘಟ್ಟನಕ್ಷೇತ್ರ. ಈ ಮಹಾ ಸಂಘರ್ಷಣ ಹೇಗೆ ಸ್ವಾಭಾವಿಕವೋ ಹಾಗೆಯೇ ಸ್ವಾರಸ್ಯಕರ. ಆ ಸ್ವಾರಸ್ಯವು ಪರಿಪೂರ್ಣವಾಗುವುದು ಮನುಷ್ಯನು ಆ ನಾನಾ ಶಕ್ತಿಗಳ ವೇಗ ಗಳನ್ನು ತಡೆದು ತಿದ್ದುವುದರಿಂದ. ಅದೇ ಸಂಸ್ಕೃತಿ. ಅದೇ ವ್ಯವ ಹಾರ ಕುಶಲತೆ. ಅದೇ ಜೀವನಕ್ಕೆ ಸೌಮ್ಯಕಾಂತಿಯನ್ನು ತರುವ ಬೆಳಕು. ಲೋಕದಲ್ಲಿ ಕ್ಷಣೇಕ್ಷಣೇ ನಮಗೆ ಬೇಕೆನ್ನಿಸುವ ವಸ್ತುಗಳು ನೂರಾರಿರುತ್ತವೆ. "ಅಸ್ಮಿನ್ ಲೋಕೇ ಬಹವಃ ಕಾಮಾಃ" ಎಂದು ಶ್ರುತಿಯೇ ಹೇಳಿದೆ (ತೈ. ಬ್ರಾ|| ೩-೯—೩). ಅವುಗಳಲ್ಲಿ ಯಾವಯಾವುದನ್ನು ಎಷ್ಟೆಷ್ಟು ಮಾತ್ರ ಪಡೆದುಕೊಂಡರೆ ಸರಿ, ಯಾವುದು ಎಷ್ಟನ್ನು ಮೀರಿದರೆ ಅತಿ, ಎಂದು ತಿಳಿಸಿಕೊಡುವುದು ಸಂಸ್ಕೃತಿ.

ಒಂದು ರಾಜ್ಯದಲ್ಲಿ ವ್ಯವಸಾಯಗಾರರು ತಮಗೆ ಹಿತವಾವು ದೆಂಬುದನ್ನು ಹೇಳಿ ಬೇಡುತ್ತಿರುತ್ತಾರೆ. ವ್ಯಾಪಾರಗಾರರು ತಮ್ಮ ಲಾಭವನ್ನು ಚಿಂತಿಸಿ ಕೂಗುತ್ತಿರುತ್ತಾರೆ. ಪಟ್ಟಣಿ ಗರು ತಮ್ಮ ಅನುಕೂಲವನ್ನು ನೋಡುತ್ತಾರೆ. ಗ್ರಾಮಾಂತರ ಗಳವರು ತಮ್ಮ ಸೌಕರ್ಯಗಳನ್ನು ಕೇಳಿಕೊಳ್ಳುತ್ತಾರೆ. ಇದರಲ್ಲಿ ಬೇರೆ ಬೇರೆ ನೋಡಿದರೆ ಪ್ರತಿಯೊಂದು ಕೋರಿಕೆಯೂ ನ್ಯಾಯ ವೆಂದೇ ತೋರುತ್ತದೆ. ಆದರೆ, ಈ ನಾಲ್ಕು ವರ್ಗಗಳನ್ನೂ ಒಳಗೊಂಡು, ಇನ್ನೂ ಅನೇಕ ವರ್ಗಗಳನ್ನೂ ಸೇರಿಸಿಕೊಂಡು,

ಅವೆಲ್ಲಕ್ಕಿಂತ ಮೇಲ್ಭಾಗದಲ್ಲಿ ನಿಂತಿರುವ ಮಹಾವರ್ಗ ಒಂದಿದೆ. ಅದೇ ದೇಶವೆಂಬುದು. ಆ ದೇಶ ಸಮಸ್ತದ ದೃಷ್ಟಿಯಿಂದ ನಾಲ್ಕಾರು ಜನವರ್ಗಗಳ ಹಕ್ಕುಗಳನ್ನೂ ಪರೀಕ್ಷಿಸಿ, ಪ್ರತಿಯೊಂದು ವರ್ಗಕ್ಕೂ ಇನ್ನೊಂದು ವರ್ಗದಿಂದ ಅನ್ಯಾಯವಾಗದ ರೀತಿಯಲ್ಲಿ ನ್ಯಾಯದೊರಕಿಸಿಕೊಡುವುದು ಮಂತ್ರಿಯ ಕಾರ್ಯ ವಿಚಕ್ಷಣೆ. ವಿವಿಧಪಕ್ಷಗಳು ಧರಿಸಿರುವ ವಿವಿಧ ಹಕ್ಕುಗಳೆಂಬ ನವಮಣಿಗಳಲ್ಲಿ ಸಮನ್ವಯಸೂತ್ರವನ್ನು ಪೋಣಿಸಿ ಹಾರಕಟ್ಟುವವನು ರಾಜ್ಯಕುಶಲಿ. ಅಡಿಗೆಯ ವಿಷಯದಲ್ಲಿ ಯಾವುದನ್ನು ನಾವು ಉಪ್ಪು ಹುಳಿ ಕಾರಗಳ ಹದವೆನ್ನುತ್ತೇವೆಯೋ, ಸಂಗೀತದಲ್ಲಿ ಯಾವುದನ್ನು ಶ್ರುತಿಲಯಮೇಳನವೆನ್ನುತ್ತೇವೆಯೋ, ವಿಗ್ರಹಶಿಲ್ಪದಲ್ಲಿ ಯಾವುದನ್ನು ಅಂಗಾಂಗಗಳ ಆನುರೂಪ್ಯವೆನ್ನುತ್ತೇವೆಯೋ, ರಾಜ್ಯನಿರ್ವಾಹದಲ್ಲಿ ಯಾವುದನ್ನು ವಿವಿಧ ಕಕ್ಷಗಳ ಸಂಧಿ ಸಮಾಧಾನ ರೂಪವಾದ ಉಪಾಯ ನೀತಿಯೆನ್ನುತ್ತೇವೆಯೋ, ಅಂಥ ಒಂದು ಬಹುಗುಣ ಸಮನ್ವಯದ ವರ್ತನೆಯನ್ನು,—ಅಂಥ ಆತ್ಮಸಂಯಮವನ್ನು,—ಅಂಥ ಸ್ನೇಹಪ್ರಧಾನವಾದ ಸ್ವಧರ್ಮಪ್ರಕಾಶವನ್ನು ಸಂಸ್ಕೃತಿ ಎನ್ನುತ್ತೇವೆ.

ಸಮನ್ವಯವೆಂದರೆ ತಾರತಮ್ಯ ನಿರ್ಣಯ. ನಮಗೆ ಉದ್ದೇಶದಲ್ಲಿರುವ ಹತ್ತಾರು ವಸ್ತುಗಳಲ್ಲಿ ಯಾವ ಒಂದನ್ನೂ ಬೇಡವೆನ್ನ ಬೇಕಾದದ್ದಿಲ್ಲ. ಆದರೆ ಅವುಗಳಿಗೆ ಸಲ್ಲುವ ಗಮನದಲ್ಲಿ ಒಂದು ಪೂರ್ವಾಪರಕ್ರಮವಿರಬೇಕು. ಕೆಲವು ಮೊದಲು ಬರತಕ್ಕವು, ಕೆಲವು ಆಮೇಲೆ. ಈ ಸ್ಥಾನ ತಾರತಮ್ಯವೇ ಸಮನ್ವಯ ನೀತಿ. ಪರಧರ್ಮದ ದೃಷ್ಟಿಯಿಂದ,—ಅಂತರಾತ್ಮೋತ್ಕರ್ಷೆಯ ದೃಷ್ಟಿಯಿಂದ,—ನಾನಾ ವಿಷಯಗಳ ಬೆಲೆಗಳನ್ನು ಗೊತ್ತುಮಾಡಿ, ಆದರಂತೆ ಅವುಗಳನ್ನು ಮೆಟ್ಟಲು ಮೆಟ್ಟಲಾಗಿ ಜೋಡಿಸಿಟ್ಟುಕೊಳ್ಳುವುದು ಸಮನ್ವಯ. ಅದು ನಮ್ಮ ಕರ್ತವ್ಯ

ಗಳ ಮತ್ತು ಇಷ್ಟಗಳ ಸೋಪಾನವ್ಯವಸ್ಥೆ. ಅದರಲ್ಲಿ ಯಾವುದಕ್ಕೂ ಅನ್ಯಾಯವಿಲ್ಲ; ಯಾವುದಕ್ಕೂ ಯೋಗ್ಯತೆಗೆ ಮೀರಿದ ಪ್ರಾಶಸ್ತ್ಯವಿಲ್ಲ.

## ಪರಿಷ್ಕರಣ ನೀತಿ

ದೇಹದೊಳಗಣ ಒಂದಾನೊಂದು ಅಂಗವಿಕಾರದಿಂದ ಬಾಧೆ ಪಡುತ್ತಿರುವ ರೋಗಿಯ ವಿಷಯದಲ್ಲಿ ಯೋಗ್ಯನಾದ ಶಸ್ತ್ರವೈದ್ಯನು (ಸರ್ಜನ್) ಎಂಥ ನಯವನ್ನು ತಾಳಿರುತ್ತಾನೋ ಲೋಕದ ಕೊಳಕು ಸೊಟ್ಟುಗಳ ವಿಷಯದಲ್ಲಿ ಸುಸಂಸ್ಕೃತನು ಅಂಥ ಸೌಮ್ಯವಾದ ಪರಿಷ್ಕರಣನೀತಿಯನ್ನು ಅನುಸರಿಸಿರುತ್ತಾನೆ. ರೋಗಿಯ ಹೊಟ್ಟೆಯೊಳಗಡೆಯ ದುರ್ಮಾಂಸವನ್ನು, ಅಥವಾ ಅವನ ಮೂಳೆಯ ಹುಣ್ಣನ್ನು, ಅಥವಾ ಅವನ ನರದ ಗಂಟನ್ನು ಸರಿಪಡಿಸಲು ವೈದ್ಯನು ಚೂರಿ ಕತ್ತರಿಗಳನ್ನು ಹಿಡಿಯಬೇಕಾದೀತು. ಆಗ ಆ ವೈದ್ಯನು "ಶಸ್ತ್ರಪ್ರಯೋಗವಿಲ್ಲದಿದ್ದರೆ ಆಗದೆ?" ಎಂದು ಮೊದಲು ಆಲೋಚಿಸುತ್ತಾನೆ. ಅದು ಅನಿವಾರ್ಯವೆಂದು ತನ್ನ ಅನ್ತಸ್ಸಾಕ್ಷಿ ಹೇಳುವ ವರೆಗೂ ಅವನು ಶಸ್ತ್ರವನ್ನು ಮುಟ್ಟಲಾರ. ಶಸ್ತ್ರವನ್ನು ಹಿಡಿದ ಬಳಿಕ ಅದರ ಪ್ರಯೋಗದಿಂದ ರೋಗಿಗೆ ನೋವು ತಾಕದಂತೆ ಮಾಡಲು ಏನೇನು ಮಾಡಬಹುದೋ ಅದನ್ನೆಲ್ಲ ಮಾಡುತ್ತಾನೆ. ನೋವನ್ನು ಪೂರ್ತಿಯಾಗಿ ತಪ್ಪಿಸುವುದು ಅಸಾಧ್ಯವಾದಾಗ ಅದನ್ನು ಎಷ್ಟು ಮಟ್ಟಿಗೆ ಕಡಮೆಯಾದರೂ ಮಾಡಲಾದೀತೋ ಅಷ್ಟು ಮಟ್ಟಿಗಾದರೂ ಮಾಡಲು ಶ್ರಮಪಡುತ್ತಾನೆ. ಅನಂತರ ಮಾಂಸವನ್ನೋ ನರವನ್ನೋ ಮೂಳೆಯನ್ನೋ ಕತ್ತರಿಸುವುದರಲ್ಲಿ ಎಷ್ಟು ಕೊಂಚಭಾಗವನ್ನು ಕೊರೆದರೆ ಸಾಕೋ ಅಷ್ಟನ್ನು ಮಾತ್ರ ತೆಗೆದುಹಾಕುತ್ತಾನೆ. ಅದಕ್ಕಿಂತ ಹೆಚ್ಚಾಗಿ

ಒಂದು ರವೆಯಷ್ಟನ್ನು ಕೂಡ ಅವನು ತೆಗೆಯನು. ತನ್ನಿಂದ ಎಲ್ಲಿ ಅತಿಕ್ರಿಯೆಯಾದೀತೋ ಎಂಬ ಭಯದಲ್ಲಿಯೇ ಅವನಿರುತ್ತಾನೆ. ಚಿಕಿತ್ಸೆ ಮುಗಿದ ಮೇಲೆ ಆ ಗಾಯವನ್ನು ಎಷ್ಟು ಬೇಗ ಮುಚ್ಚಿ ಮಾಯಿಸಲಾದೀತೋ ಅಷ್ಟು ಬೇಗ ಅದನ್ನು ಮಾಯಿಸುತ್ತಾನೆ.

ಸುಸಂಸ್ಕೃತನು ತನ್ನ ಸುತ್ತುಮುತ್ತಣವರ ಮಾತುಕಥೆಗಳಲ್ಲಿಯೂ ನಡೆವಳಿಕೆಗಳಲ್ಲಿಯೂ ಇರುವ ವಕ್ರವಿಕಾರಗಳ ವಿಷಯದಲ್ಲಿ ಸಮ್ಮತಿಪಟ್ಟಿರುವವನಲ್ಲ, ಆದರೆ ಅವನ್ನು ತಿದ್ದಬೇಕೆಂದು ದುಡುಕುವವನೂ ಅಲ್ಲ. ಅವನು ಯಾವಾಗಲೂ ತನ್ನನ್ನು ತಾನು ತಿದ್ದಿಕೊಳ್ಳುವ, ಮತ್ತು ತನಗೆ ಬೇಕಾದವರನ್ನು ತಿದ್ದುವ ಯೋಚನೆಯಲ್ಲಿಯೇ ಇರುತ್ತಾನೆ. ಆದರೆ ಆ ತಿದ್ದುವ ಪರಿಪಾಟಿಯಲ್ಲಿ ಒರಟಾಟವಿರದು. ಹಟದ ಕೂಗು ಅವನ ಬಾಯಿಂದ ಹೊರಡದು ; ಕೆಂಗಣ್ಣೂ ಕಡಿಹಲ್ಲೂ ಅವನ ಮುಖದಲ್ಲಿ ತೋರವು ; ಅಸಮ್ಮತಿ ತಿಳಿಸುವುದು ಅವಶ್ಯವಾದಾಗ, ಬಿಚ್ಚುನುಡಿ ಅನಿವಾರ್ಯವಾದಾಗ, ಅವನು ಎಷ್ಟು ಮಟ್ಟಿನ ಬಿಸಿ ಬಿರುಸುಗಳು ಸಾಕಾದಾವೋ ಅಷ್ಟನ್ನು ಮಾತ್ರ ತೋರಿಸಿಯಾನೇ ಹೊರತು ಮನಸ್ಸಿನೇ ರೇಗಾಟವಾಡನು. ಮತ್ತು ತನ್ನ ಮಾತಿನಿಂದಾಗಲಿ ನಡತೆಯಿಂದಾಗಲಿ ಆದ ನೋವನ್ನು ಬೇಗ ಮರೆಯಿಸುತ್ತಾನೆ.

ಮಗುವನ್ನು ಶಿಕ್ಷಿಸುವಲ್ಲಿ ತಾಯಿ ಹೇಗೆ ನಡೆದಾಳೋ, ಗಂಡನನ್ನು ದಂಡಿಸುವಲ್ಲಿ ಸಾಧ್ವಿ ಹೇಗೆ ನಡೆದಾಳೋ, ಹಾಗೆ ಲೋಕವೃತ್ತಕ್ಕೆ ತನ್ನ ಪ್ರತಿವೃತ್ತದಿಂದ ಉತ್ತರ ಕೊಡುವವನು ಸುಸಂಸ್ಕೃತನು. ಇತರರ ಗಟ್ಟಿಗಂಟಲು ಅವನಿಂದ ಬೊಬ್ಬೆ ಹಾಕಿಸದು ; ಇತರರ ಕೆಟ್ಟಮೋರೆ ಅವನ ಪ್ರಸನ್ನತೆಯನ್ನು ಹಾರಿಸದು. ಸಂಸ್ಕೃತಿಯ ಹೆಗ್ಗುರುತನ್ನು

ಒಂದೇ ಮಾತಿನಲ್ಲಿ ತಿಳಿಸಬೇಕೆಂದರೆ ಆ ಮಾತು "ಒರಟು ತನವಿಲ್ಲದಿರುವುದು" ಎಂದು. ಲೋಕವ್ಯವಹಾರದಲ್ಲಿ ಒಂದಿಷ್ಟು ಗಟ್ಟಿತನ ಅವಶ್ಯವಾಗುತ್ತದೆ. ಕೂಗಾಡಿಸುವ ಸಂದರ್ಭ ಗಳು ಆಗಾಗ ಒದಗುತ್ತವೆ. ಮನುಷ್ಯನು ಎಲ್ಲ ವೇಳೆಗ ಳಲ್ಲಿಯೂ ಬೆಣ್ಣೆಮುದ್ದೆಯಾಗಿ, ಬೆಲ್ಲದುಂಡೆಯಾಗಿ, ಇರುವುದು ಸಾಧ್ಯವಿಲ್ಲ. ಅದು ಧರ್ಮಸಾಧಕವೂ ಅಲ್ಲ. ಧರ್ಮವೇ ಎಷ್ಟೋ ಸಮಯಗಳಲ್ಲಿ ಒಂದು ವೀರ್ಯವನ್ನೂ ಒಂದು ನಿರ್ದಾಕ್ಷಿಣ್ಯ ವನ್ನೂ ಅಪೇಕ್ಷಿಸುತ್ತದೆ. ಅಂಥ ಸಮಯಗಳಲ್ಲಿ ಸುಸಂಸ್ಕೃತನು ಯದ್ವಾತದ್ವಾ ಆಡದೆ, ಎಷ್ಟುಮಾತ್ರದ ಕಠಿನತೆ ಲೋಕಪರಿಷ್ಕರ ಣೆಗೆ ಅವಶ್ಯವೋ ಅಷ್ಟುಮಾತ್ರ ಕಠಿನನಾಗುತ್ತಾನೆ. ಒಳ್ಳೆಯ ಉಪಾಧ್ಯಾಯನ ಬೆತ್ತದ ಒಂದು ಕೊನೆಯಲ್ಲಿ ಚುರುಕು, ಇನ್ನೊಂದು ಕೊನೆಯಲ್ಲಿ ಪ್ರೀತಿ. ಸುಸಂಸ್ಕೃತನ ಕಾಠಿನ್ಯ ಆ ಬಗೆಯದು. ಅದರಲ್ಲಿ ಒರಟಾಟವಿಲ್ಲ; ವಿಪರೀತವಿಲ್ಲ; ವೈಮರೆತ ವಿಲ್ಲ. ಎಲ್ಲದರಲ್ಲಿಯೂ ಅವನದು ಒಂದು ನಯದ ದಾರಿ, ಒಂದು ನಾಜೂಕು ಹೆಜ್ಜೆ, ಒಂದು ಗದ್ದಲವಿಲ್ಲದ ಗಟ್ಟಿ ನಡತೆ, ಒಂದು ಒರಟಲ್ಲದ ಕೈಪಟ್ಟು.

## (೫) ಸರಸತೆ

ಎಲ್ಲಕ್ಕಿಂತ ಮೇಲಾದದ್ದು ಸರಸತೆ,—ಎಂದರೆ, ಎಲ್ಲ ಸಂದರ್ಭ ಗಳಲ್ಲಿಯೂ ಸ್ವಾರಸ್ಯಕಣವನ್ನು ಹುಡುಕಿ ತೆಗೆಯುವ ಪ್ರವೃತ್ತಿ. ಮನುಷ್ಯ ಸನ್ನಿವೇಶಗಳಲ್ಲಿ ದುರ್ಗುಣವೂ ದುಃಖಬೀಜವೂ ಇಲ್ಲ ದಿರುವುವು ತೀರಾ ಅಪರೂಪ. ನಮ್ಮ ಕಣ್ಣಿಗೆ ಪ್ರತಿನಿತ್ಯವೂ ಕಾಣಬರುವುದರಲ್ಲೆಲ್ಲಾ ದೋಷಭಾಗವೇ ಹೆಚ್ಚಾಗಿರುತ್ತದೆ. ಸುಸಂಸ್ಕೃತನಾದವನು ಹಾಗೆ ಎದ್ದು ಕಾಣುವ ವಿಕಾರಗಳ ನಡುವೆ ಸೊಗಸೆಲ್ಲಿರಬಹುದೆಂದು ಕುತೂಹಲದಿಂದ ಹುಡುಕು

ತ್ತಾನೆ. ಕಹಿಯಾದ ಸಂದರ್ಭಗಳಲ್ಲಿ ಸವಿ ಎಲ್ಲಿರಬಹುದೆಂದು ನೋಡುತ್ತಾನೆ. ಅದೃಷ್ಟ ತನ್ನನ್ನು ಮರಳ್ಗಾಡಿನಲ್ಲಿಳಿಸಿದಾಗ ಎದೆ ಕುಗ್ಗಿ ಬೆಪ್ಪಾಗಿ ನಿಲ್ಲದೆ, " ಒಯೆಸಿಸ್ " (Oasis) ತಂಪು ತಾವಿಗಾಗಿ ಹುಡುಕಾಡುವ ಸ್ವಭಾವ ಅವನದು. ಇರುಳ್ಗಾಡಿನಲ್ಲಿ ಹೆಜ್ಜೆಜಾಡಿಗಾಗಿ,—ಹಳ್ಳಿಮನೆಯ ಹಣತೆ ಬೆಳಕಿಗಾಗಿ,—ಕಣ್ಣಾರಳಿಸುವವನು ಅವನು. ಈ ಗುಣವನ್ನು ನಮ್ಮ ಪೂರ್ವಿಕರು ಗುಣಗ್ರಹಣ ಶಕ್ತಿಯೆಂದು ಕರೆದಿದ್ದಾರೆ. ಹಂಸಪಕ್ಷಿಯು ನೀರು-ಹಾಲಿನಲ್ಲಿ ಸಾರವಾದ ಕ್ಷೀರಾಂಶವನ್ನು ಮಾತ್ರ ಗ್ರಹಿಸಿ, ನಿಸ್ಸಾರವಾದ ನೀರನ್ನು ಬಿಟ್ಟುಬಿಡುತ್ತದೆಯಂತೆ. ಪರಮೇಶ್ವರನು ಸಮುದ್ರದಿಂದ ಬಂದ ಚಂದ್ರ, ವಿಷ ಎರಡರಲ್ಲಿ ಚಂದ್ರನನ್ನು ತನ್ನ ತಲೆಯ ಮೇಲೆ ತೊಟ್ಟು, ವಿಷವನ್ನು ಮಾತ್ರ ಅದು ಇತರರನ್ನು ನೋಕದ ಹಾಗೆ ತನ್ನ ಕೊರಳಲ್ಲಿ ನಿಲ್ಲಿಸಿಕೊಂಡಿರುತ್ತಾನಂತೆ. ಈ ಗುಣಪಕ್ಷಪಾತವೇ ರಸಿಕತೆ. ಸುಸಂಸ್ಕೃತನು ಎಂಥ ಸಂದರ್ಭದಲ್ಲಿಯೂ ಅದರ ಅವಲಕ್ಷಣಗಳ ಕಡೆಯಿಂದ ತನ್ನ ನೋಟವನ್ನು ಸೆಳೆದು, ಅವುಗಳ ಹಿಂದೆ ಅವಿತಿರಬಹುದಾದ ಒಳ್ಳೆಯ ಲಕ್ಷಣಗಳ ಕಡೆಗೆ ಕಣ್ಣನ್ನು ತಿರುಗಿಸುತ್ತಾನೆ. ಆಪತ್ತಿನಿಂದ ಕುಗ್ಗಿರುವವರಿಗೆ ಕತ್ತಲೆಯಿಂದಾಚೆ ಬೆಳಕಿದ್ದೀತೆಂಬ ಭರವಸೆಯನ್ನುಂಟುಮಾಡಲು ಪ್ರಯತ್ನಿಸುತ್ತಾನೆ. ಮುಖ ಬಿಗಿದು ಕುಳಿತಿರುವವರ ನಡುವೆ ಒಂದು ನಗುವನ್ನು ಸಿಡಿಲಿಸುವ ಮಾತನ್ನೆತ್ತುತ್ತಾನೆ. ನೀರಸವೆನಿಸಿದ ಪ್ರಕರಣದಲ್ಲಿ ಅವನು ಒಂದು ರಸಾವಕಾಶವನ್ನು ಕಲ್ಪಿಸಿಕೊಡುತ್ತಾನೆ. ಮರದ ಮೇಲಣ ಬಿರಿದ ತೊಗಟೆಯಿಂದಲೂ ಕರಟುಕೊಂಬಿನಿಂದಲೂ ಅವನು ತನ್ನ ಕಣ್ಣನ್ನು ಹೊಸ ಚಿಗುರಿನ ಕಡೆಗೆ ತಿರುಗಿಸುತ್ತಾನೆ. ಜಗತ್ತಿನಲ್ಲಿ ಹಳಸಲಿನ ನಡುವೆ ಹೊಸದೂ, ಒಣಕಲಿನ ಹಿಂದೆ ಹಸಿರೂ, ಎಲ್ಲೆಲ್ಲಿಯೂ

ಎಂದೂ ಇರುತ್ತವೆಂದು ಅವನ ನಂಬಿಕೆ. ಎಂಥ ಸನ್ನಿವೇಶ ದಲ್ಲಿಯೂ ಅವನ ಮನಸ್ಸು ಸ್ವಾರಸ್ಯವನ್ನನ್ವೇಷಿಸುತ್ತದೆ. ಅವನು ಸಹೃದಯ. ಅವನ ಒಳಗಡೆ ಯಾವಾಗಲೂ ಮಾನವಪ್ರೀತಿಯ ರಸ,—ಸಹಾನುಭೂತಿಯ ರಸ,—ಸ್ನೇಹದ ರಸ ಉಕ್ಕುತ್ತಿರು ತ್ತದೆ. ಆ ರಸದ ಮಹಿಮೆಯಿಂದ ಅವನ ಎಲ್ಲ ಮಾತುಕಥೆ ನಡತೆ ನೀತಿಗಳೂ ಜನಕ್ಕೆ ಹಿತವೆನ್ನಿಸುತ್ತವೆ. ಮನುಷ್ಯಜೀವನಕ್ಕೆ ಒಂದು ಸೊಬಗನ್ನು ಕೊಟ್ಟು ಅದನ್ನು ಆಕರ್ಷಕವನ್ನಾಗಿ ಮಾಡುವುದು ಆ ರಸಿಕತೆ,—ಆ ಸೌಹಾರ್ದ. ಅದೇ ಸಂಸ್ಕೃತಿಯ ಒಳತಿರುಳು.

ಪ್ರಪಂಚಯಂತ್ರ ಬಹು ದೊಡ್ಡದು, ಬಹು ಭಾರವಾದದ್ದು. ಅದರ ಚಕ್ರಗಳೂ ಝುಂಪೆಗಳೂ ನೂರಾರು. ಅವು ಅತಿಯಾಗಿ ಚೀರಿಡದೆ, ಪದೇ ಪದೇ ನಿಂತುಬಿಡದೆ, ಸಾಗುತ್ತಿರಬೇಕಾದರೆ ಅದರ ಗಾಲಿಗಳಿಗೂ ಕೀಲುಗಳಿಗೂ ನಾವು ಆಗಾಗ ತೈಲ ಮಜ್ಜನ ಮಾಡಿಸುತ್ತಿರಬೇಕು. ಆ ದಾರಿ ನುಣ್ಣಗಿಸುವ ಎಣ್ಣೆಯೇ ಸಂಸ್ಕೃತಿ. ಸುಸಂಸ್ಕೃತನ ನಯ ನಿಯಮಗಳಿಂದ,—ಅವನ ಸೂಕ್ಷ್ಮ ವಿಚಾರದೃಷ್ಟಿಗೆ ತೋರುವ ನೀತಿಯುಕ್ತಿ ಗಳಿಂದ,—ಅವನ ನಡೆನುಡಿಗಳ ಒಂದು ಸಮಾಧಾನ ಸ್ನೇಹ ದಿಂದ—ಜೀವನದ ಹೊರೆ ನಮಗೆ ಸಹ್ಯವಾಗುವ ಮಟ್ಟಿಗಾದರೂ ಭಾರವಿಳಿಯುತ್ತದೆ; ಮಾರ್ಗಾಯಾಸ ಮರೆಯುತ್ತದೆ. ಧರ್ಮ ರಥಕ್ಕೆ ದಾರಿಯನ್ನು ಸುಗಮಮಾಡಿಕೊಡುವ ಶಿಲ್ಪೋಪಾಯ ಸಂಸ್ಕೃತಿ.

---

# ಸಂಸ್ಕೃತಿ ಪುಸ್ತಕಮಾತ್ರದಿಂದಲ್ಲ

ನಮ್ಮ ದೇಶದಲ್ಲಿ ಸಂಸ್ಕೃತಿಯೆಂಬುದು ಬಹು ಪುರಾತನವಾದ ವಸ್ತು. ಅದು ಪುಸ್ತಕ ವಿದ್ಯೆಗಿಂತ ಹಿಂದಿನದು. ಯುರೋಪಿನ ನವನಾಗರಿಕತೆ ಇಲ್ಲಿ ಬೇರೂರುವುದಕ್ಕೆ ಮುಂಚೆ ಅಕ್ಷರಜ್ಞರಲ್ಲದ ಸುಸಂಸ್ಕೃತ ಜನರು ನಮ್ಮಲ್ಲಿ ಎಲ್ಲೆಲ್ಲಿಯೂ ಯಥೇಷ್ಟವಾಗಿರುತ್ತಿದ್ದರು. ಯಾವಾತನನ್ನಾದರೂ ಕುರಿತು ಮನ್ನಣೆಯ ಮಾತನ್ನಾಡಬೇಕೆನ್ನಿಸಿದರೆ "ಆತ ಸಭ್ಯ" ಎನ್ನುವುದು ನಮ್ಮಲ್ಲಿ ರೂಢಿಯಾಗಿತ್ತು. ಸಭ್ಯತೆಯೇ,—ಸಭಾಯೋಗ್ಯತೆಯೇ, ಎಂದರೆ ಸಹವಾಸಾರ್ಹತೆಯೇ—ಸಂಸ್ಕೃತಿ. ಹಳ್ಳಿಗಳಲ್ಲಿ ಓದುಬರಹಗಳನ್ನರಿಯದ ಒಕ್ಕಲಿಗ ಕುರುಬ ಕುಂಬಾರ ಮೊದಲಾದವರಲ್ಲಿ ಸಂಸ್ಕೃತಿಯೇನೂ ಕಡಮೆಯಾಗಿರಲಿಲ್ಲ. ನ್ಯಾಯಾನ್ಯಾಯಗಳನ್ನೂ ಮಾನಮರ್ಯಾದೆಗಳನ್ನೂ ಇದು ದೊಡ್ಡದು ಇದು ಚಿಕ್ಕದೆಂಬ ತಾರತಮ್ಯವನ್ನೂ ಅವರು ಚೆನ್ನಾಗಿ ಬಲ್ಲವರಾಗಿರುತ್ತಿದ್ದರು. ವಿದ್ಯಾವಂತರೆಂದೆನಿಸಿಕೊಂಡಿದ್ದ ಜನವರ್ಗಗಳಲ್ಲಿ ಆಗಿದ್ದ ಜಗಳ ತಕರಾರುಗಳನ್ನು ವ್ಯವಸ್ಥೆಮಾಡಲು ಅವರು ಈ ನಿರಕ್ಷರ ಸಭ್ಯರನ್ನು ಕರೆದು ಇವರು ಕೊಟ್ಟ ತೀರ್ಮಾನವನ್ನು ಗೌರವಿಸುತ್ತಿದ್ದರು. ಹೀಗೆ ಸಂಸ್ಕೃತಿ ಸಭ್ಯತೆಗಳಿಗೂ ಪುಸ್ತಕಪಾಂಡಿತ್ಯಕ್ಕೂ ಅನಿವಾರ್ಯವಾದ ಸಂಬಂಧವೇನೂ ಇಲ್ಲವೆಂಬುದು ಸ್ಪಷ್ಟವಾಗಿದೆ.

ಹಾಗಾದರೆ ಸಂಸ್ಕೃತಿ ಆಗ ಅಷ್ಟು ವಿಸ್ತಾರವಾಗಿ ಹರಡಿದ್ದದ್ದು ಹೇಗೆ? ನಮ್ಮ ಪೂರ್ವಿಕರು ಸಂಸ್ಕೃತಿಯ ನಿಜವಾದ ಸ್ವರೂಪವನ್ನೂ ದಾರಿಗಳನ್ನೂ ಕಂಡುಕೊಂಡಿದ್ದರೆಂದು ತೋರುತ್ತದೆ. ಅದರಲ್ಲಿ ಮೂರು ನಾಲ್ಕು ಸಂಗತಿಗಳು ಮುಖ್ಯವಾದುವು.

(೧) ಸಂಸ್ಕೃತಿ ಜೀವಂತವಸ್ತು. ಅದು ಗಿಡದಂತೆ, ಮಗುವಿ ನಂತೆ, ತಾನಾಗಿ ಬೆಳೆಯತಕ್ಕದ್ದು. ಅದು ಯಂತ್ರೋತ್ಪನ್ನ ವಾದ ಸರಕಿನಂತಲ್ಲ.

(೨) ಅದು ಗಿಡದೊಳಗಿನ ಹೂವಿನಂತೆ ಮನುಷ್ಯನ ಒಳಗಿ ನಿಂದ ಬೆಳೆದು ಹೊರಕ್ಕೆ ಬರತಕ್ಕದ್ದು, ಹೊರಗಿನಿಂದ ಒಳಕ್ಕೆ ತಳ್ಳಲಾಗತಕ್ಕದ್ದಲ್ಲ. ಅದು ಮೈಯ ಮೇಲ್ಗಡೆಗೆ ಅಂಟಿಸಿದ ಒಡವೆ ತೊಡಿಗೆಗಳಂತಲ್ಲ.

(೩) ಅದು ಜೀವನದ ಎಲ್ಲ ಭಾಗಗಳಲ್ಲಿಯೂ ಒಳ್ಳೆಯ ಪರಿಮಳದಂತೆ ವ್ಯಾಪಿಸತಕ್ಕದ್ದು. ಯಾವುದೋ ಒಂದೆರಡು ಅಂಗಗಳಲ್ಲಿ ಮಾತ್ರ ಕಾಣಿಸಿಕೊಂಡು ಮಿಕ್ಕೆಡೆ ಹೊಗದೆ ಇರತಕ್ಕದ್ದಲ್ಲ.

(೪) ಅದು ನಮ್ಮ ಆತುರದಿಂದ ಉಂಟಾಗುವುದಲ್ಲ, ಸಾವ ಕಾಶವಾಗಿ ಉಂಟಾಗತಕ್ಕದ್ದು. ಮಗುವಿಗೆ ಹಲ್ಲು ಹುಟ್ಟು ವುದಕ್ಕೂ ಮಾತುಬರುವುದಕ್ಕೂ ನಡಿಗೆಬರುವದಕ್ಕೂ ನಾವು ಅವಸರಪಟ್ಟರೆ ಉಪಯೋಗವಾಗದು. ಆಯಾ ವ್ಯಕ್ತಿಯ ಗುಣ ಬುದ್ಧಿ ಸಿದ್ಧತೆಗಳಿಗನುಸಾರವಾಗಿ ಅವನವನಿಗೆ ಸಂಸ್ಕೃತಿ ಸಂಪಾದನೆಯಾಗುತ್ತದೆ. /

ಸಂಸ್ಕೃತಿಯು ಸಮಾಜದ ಸಾಮಾನ್ಯ ಬೆಳವಣಿಗೆಯಲ್ಲಿ ಸ್ವತ ಏವ ಫಲಿಸುವ ವಸ್ತು,—ದೇಹಬಲದ ಹಾಗೆ. ಆಹಾರ ವಿಹಾರಕ್ರಮಗಳು ಸರಿಯಾಗಿದ್ದರೆ ಬಲ ಅದರಷ್ಟಕ್ಕೆ ಅದೇ ಬರುತ್ತದೆ; ಅದಕ್ಕಾಗಿ ಬೇರೆ ಪ್ರಯತ್ನ ಬೇಕಿಲ್ಲ. ಆರೋಗ್ಯದ ಒಂದು ಲಕ್ಷಣವೇ ಬಲ. ಅದರಂತೆ ಸಮಾಜಜೀವನದಲ್ಲಿ ವಿದ್ಯಾ ಶಿಕ್ಷಣಗಳ ವ್ಯವಸ್ಥೆ ತಕ್ಕಂತಿದ್ದರೆ ಸಂಸ್ಕೃತಿ ತಾನಾಗಿ ಬೆಳೆಯುತ್ತದೆ, ಅದಕ್ಕಾಗಿ ಬೇರೆ ಪ್ರಚಾರಘೋಷಣೆ ಬೇಕಿಲ್ಲ. ಇದನ್ನು ಕಂಡುಕೊಂಡಿದ್ದರು ನಮ್ಮ ಪೂರ್ವಿಕರು. ಪ್ರತ್ಯಕ್ಷ

ಪ್ರಚಾರಕ್ಕಿಂತ ಪರೋಕ್ಷಪ್ರಭಾವವು ಹೆಚ್ಚು ಫಲಕಾರಿ ಯೆಂದು ಅವರು ತಿಳಿದುಕೊಂಡಿದ್ದರು. ಆದದ್ದರಿಂದ ಪರೋಕ್ಷ ಪ್ರಭಾವಕಾರಿಗಳಾದ ಕಥೆ ಕಾವ್ಯ ಗಾನ ಶಿಲ್ಪಾದಿ ಕಲಾಂಕುರ ಗಳನ್ನು ಅವರು ಜನಜೀವನಕ್ಷೇತ್ರದಲ್ಲಿ ಎಲ್ಲೆಲ್ಲಿಯೂ ನೆಟ್ಟರು. ಭಜನೆ, ಪುರಾಣ, ಹರಿಕಥೆ, ಕಾವ್ಯಗಾನ, ಲಾವಣಿ, ಭಾಗವತ ರಾಟ, ಯಕ್ಷಗಾನ, ನಾಟಕ—ಈ ನಾನಾ ಕಲೆಗಳು ಜನವನ್ನು ಆಕರ್ಷಿಸಿ ತಮ್ಮ ಹಿಡಿತದಲ್ಲಿ ಉಳಿಸಿಕೊಳ್ಳಬಲ್ಲವು. ಗುಡಿ, ಗೋಪುರ, ಮೆರವಣಿಗೆ, ಜಾತ್ರೆ—ಇವೂ ಹಾಗೆಯೇ. ಸಂತೋ ಷದ ರಸದಲ್ಲಿ ಶಿಕ್ಷಣದ ಸಾರವನ್ನಡಗಿಸಿಕೊಂಡಿರುವ ಪಾನಕ ಕಲೆಯದು. ಬಾಯಿಗೆ ರುಚಿಯಾದ ಸಾರಿನಲ್ಲಿ ಆಹಾರ ಜೀರ್ಣಕ್ಕೆ ಸಹಕಾರಿಗಳಾದ ಜೀರಗೆ ಮೆಣಸು ಕೊತ್ತುಂಬರಿ ಮೊದಲಾದ ಔಷಧದ್ರವ್ಯಗಳು ಸೇರಿಕೊಂಡು ನಮಗೆ ತಿಳಿಯದಂತೆಯೇ ಒಳ್ಳೆಯ ಕೆಲಸಮಾಡುವ ಹಾಗೆ, ಕಾವ್ಯಕಲೆಗಳು ಮನಸ್ಸಿಗೆ ಉಲ್ಲಾಸ ಕೊಡುವುದರಲ್ಲಿಯೇ ವಿಕಾಸವನ್ನಾಗಿಸುತ್ತವೆ. ಪೂಜ್ಯ ವಸ್ತುಸನ್ನಿಧಿಯಲ್ಲಿ ಪೂಜ್ಯವಿಷಯ ಸ್ಮರಣೆಯಿಂದ ಉಂಟಾಗುವ ಭಾವೋನ್ನತಿಯೇ ಸಂಸ್ಕೃತಿಯ ಮೂಲ.

ಭಾವೋನ್ನತಿಯ ವಾತಾವರಣವನ್ನು ಕಲ್ಪಿಸುವುದು ನಮ್ಮ ಪೂರ್ವಿಕರ ಪ್ರಯತ್ನವಾಯಿತು. ಪ್ರತ್ಯಕ್ಷ ಬೋಧನೆ ಘೋಷಣೆಗಳು ನಿಷ್ಫಲ ಮಾತ್ರವೇ ಅಲ್ಲದೆ ದುಷ್ಫಲಪ್ರದಗಳೂ ಆಗಬಹುದೆಂದು ಅವರು ಶಂಕೆಪಟ್ಟಿದ್ದರು. ದೇವಾಲಯ, ಧರ್ಮಸತ್ರ, ಮಠ, ಪುಣ್ಯಕ್ಷೇತ್ರ ಇಂಥ ಸಂಸ್ಥೆಗಳೆಲ್ಲ ಜನದ ಮನಸ್ಸನ್ನು ಸಾಮಾನ್ಯಸ್ಥಿತಿಯಿಂದ ಒಂದು ಮೇಲ್ಮಟ್ಟಕ್ಕೆ ತ್ತಲು ಸಾಧಕಗಳಾದುವು. ಪೂಜೆ ಪುರಾಣಗಳು ಜನಕ್ಕೆ ಅವರ ಕಷ್ಟದಲ್ಲಿ ಒಂದು ಧೈರ್ಯವನ್ನೂ ಅವರ ಕೋಪಾಟೋಪ ಗಳಲ್ಲಿ ಒಂದು ತಾಳ್ಮೆಯನ್ನೂ ಅವರ ಸಂದೇಹವೇಳೆಯಲ್ಲಿ ಒಂದು

ನಂಬಿಕೆಯನ್ನೂ ಒದಗಿಸಬಂದವು. ಹಾಗೆಯೇ ಅವು ಅವರಿಗೆ ಒಂದು ಉಚ್ಚನೀಚ ವಿವೇಕವನ್ನೂ ವಿನಯವನ್ನೂ ಕಲಿಸಿದವು. ಸಂಸ್ಕೃತಿಯೆಂಬುದಿನ್ನೇನು ? ಸಾವಿರಾರು ವರ್ಷ ಇಂಥ ಅಂತರಂಗವ್ಯವಸಾಯವು ಆತುರವಿಲ್ಲದೆ, ಕೃತಕವಿಲ್ಲದೆ, ಸದ್ದು ಗದ್ದಲವಿಲ್ಲದೆ ಸಂತತವಾಗಿ ನಡೆದದ್ದರ ಫಲ ನಮ್ಮ ಜನದ ಸಂಸ್ಕೃತಿ. ಕಷ್ಟದಲ್ಲಿ ಸಹನೆ, ಅನ್ಯಾಯದ ನಡುವೆ ನ್ಯಾಯ ಶ್ರದ್ಧೆ, ಇಹವಿಚಾರದೊಡನೆ ಪರದ ಚಿಂತೆ—ಈ ಗುಣಗಳು ಹಿಂದೂ ಜನತೆಯನ್ನು ಸಾವಿರಾರು ವರ್ಷಗಳಿಂದ ಕಾಪಾಡು ತ್ತಿರುವ ರಕ್ಷಾಕವಚ. ಇದು ಪ್ರಕಟನೆ ಪ್ರಚಾರಗಳ ಕಾರ್ಯ ವಲ್ಲ, ಜನದ ಸ್ವೈಜವಿವೇಕದ ಕಾರ್ಯ. ಸಂಸ್ಕೃತಿಯೆಂಬುದರ ಬೆಲೆಯನ್ನು ಜನತೆ ತಾನಾಗಿ ಕಂಡುಕೊಂಡು ಅಂಗೀಕರಿಸಿದೆ. ಆದದ್ದರಿಂದಲೇ ಆ ಸಂಸ್ಕೃತಿ ಉಳಿದು ನಿಂತಿದೆ.

---

## ಪುರೋದೃಶ್ಯ

ಸಂಸ್ಕೃತಿಯ ಪುರೋದೃಶ್ಯ ನಮ್ಮ ದೇಶದಲ್ಲಿ ಸದ್ಯಕ್ಕೆ ಉತ್ಸಾಹಕಾರಕವಾಗಿಲ್ಲ. ಪೂರ್ವದ ಧ್ಯೇಯಸಂಪ್ರದಾಯ ಗಳು ನಮ್ಮ ಜೀವನದಿಂದ ಈಗ ಬಹುಮಟ್ಟಿಗೆ ಲುಪ್ತವಾಗಿವೆ. ಹೊಸ ವ್ರತನಿಷ್ಠೆ ಯಾವುದೂ ನಮಗೆ ಇನ್ನೂ ಬಂದಿಲ್ಲ. ಯೂರೋಪಿನಿಂದ ಬಂದ ನವನಾಗರಿಕತೆ ಈಗಿಗೆ ಇನ್ನೂ ಮುಖಾಲಂಕಾರಮಾತ್ರದ್ದಾಗಿದೆ. ಆಹಾರವಿಹಾರಕ್ರಮಗಳಲ್ಲಿ ಹಳೆಯ ಕಟ್ಟುಪಾಡು ಸಡಿಲುತ್ತಿದೆ. ಜನದ ನೀತಿಶ್ರದ್ಧೆ ಕದಲಿದೆ. ಸತ್ಯ, ನಿಯತ್ತು, ಪುಣ್ಯ—ಎಂಬುದರಲ್ಲಿ ಹಿಂದಿನ ಜನಕ್ಕೆ ನಂಬಿಕೆ ಯಿತ್ತು ; ಅದು ಮೂಢಭಕ್ತಿಯೆಂದೇ ಇಟ್ಟುಕೊಳ್ಳೋಣ. ಅದರಿಂದ ಅವರ ನಡವಳಿಕೆಯಲ್ಲಿ ಒಂದು ಸತ್ತ್ವ, ಒಂದು ದೃಢತೆ,

ಒಂದು ವಿಶ್ವಾಸಾರ್ಹತೆ ಕಾಣಬರುತ್ತಿತ್ತು. ಇಂದು ಪಾಪ ವೆಂಬುದರ ಭಯ ತಪ್ಪಿಹೋಗುತ್ತಿದೆ. ಜನ್ಮಾಂತರ ಲೋಕಾಂತರ ಗಳಲ್ಲಿ ನಂಬಿಕೆ ಕ್ಷೀಣವಾಗಿದೆ. ದೇವರೆಂಬುದರ ಸ್ಮರಣೆ ಕೂಡ ಅಪರೂಪವಾಗುತ್ತಿದೆ. ದೇವರ ಪ್ರಸಕ್ತಿ ಎಲ್ಲಾ ದರೂ ಇದ್ದರೆ ಅದು ನಮ್ಮ ಸ್ವಾರ್ಥಸನ್ನಿವೇಶದಲ್ಲಿ ಮಾತ್ರ. ದೃಶ್ಯಪ್ರಪಂಚವೇ, ಅದರ ಈ ಹೊತ್ತಿನ ಅನುಭವವೇ, ಈಗ ಜನಕ್ಕೆ ಜೀವಿತ ಸರ್ವಸ್ವವಾಗಿ, ಅದೃಶ್ಯ ಸತ್ಯದ ಕಡೆಗೂ ಶಾಶ್ವತ ಗತಿಯ ಕಡೆಗೂ ಅವರ ಮನಸ್ಸು ತಿರುಗಲೊಲ್ಲದೆ ಇದೆ. ಈ ಕಾರಣದಿಂದ ಇಹವು ಪರಕ್ಕಿಂತ ಹೆಚ್ಚು ಬೆಲೆಯುಳ್ಳದ್ದಾಗಿ, ಹಳೆಯ ನೀತಿ ಪದ್ಧತಿಗಳು ಇಂದು ತಲೆಕೆಳಗಾಗಿವೆ.

ಮೊದಮೊದಲು ಇಂಗ್ಲಿಷ್ ಅಕ್ಷರ ಕಲಿತವರ ವಿವೇಕಕ್ಕೆ ಪಾಶ್ಚಾತ್ಯ ನಾಗರಿಕತೆಯ ಹೊಳಪು ಕಣ್ಣುಕುಕ್ಕುವ ಅತಿ ಪ್ರಭೆಯಾಯಿತು. ಸರಕಾರದ ಪದವಿಯೂ ಸಕಾಲವೇತನವೂ ಪಡೆದವರ ತಲೆಗೆ ಮದ್ಯವಾಯಿತು, ಪಡೆಯದವರ ಕಣ್ಣಿಗೆ ಮರಳಾಯಿತು. ಅಧಿಕಾರಪಡೆದವರ ಜೊತೆಗೆ ವಿದೇಶವ್ಯಾ ಪಾರಕ್ಕೆ ಅನುವಾಗಿ ನಿಂತ ವ್ಯಾಪಾರಿವರ್ಗವೂ ಸೇರಿತು. ಹಣದ ಅಟ್ಟಹಾಸ ಬೆಳೆಯಿತು. ಮೆರುಗುನೋಟ ಮೇಜಿ ನೂಟಗಳು ಸ್ವರ್ಗದ ಹೆಸರನ್ನು ಅಳಿಸಿದವು. ಬ್ಯಾಂಕು ಒಪ್ಪಿದ್ದು ಭಾಗ್ಯ; ಬಾಯಿ ಮೆಚ್ಚಿದ್ದು ಸೌಖ್ಯ; ಉಂಡದ್ದೇ ದಕ್ಕತಕ್ಕದ್ದು ; ಮಿಗಿಸಿದ್ದೇ ಮುಂಗಾವಲು :—ಇಂಥ ಭಾವನೆಗಳು ಜನದಲ್ಲಿ ಹರಡುತ್ತ ಬಂದಿವೆ. ನಾಣ್ಯದ ನಾಗರಿಕತೆ ಧಾನ್ಯದ ನಾಗರಿ ಕತೆಯನ್ನು ತಬ್ಬಿಬ್ಬಲಾಗಿಸಿದೆ.

ನಮ್ಮಲ್ಲಿ ಬುದ್ಧಿ ಸಂಕ್ಷೋಭೆಗೆ ಕಾರಣವಾದ ಸಂಗತಿ ಇನ್ನೂ ಒಂದಿದೆ. ಇಂಗ್ಲಿಷಿನವರು ತಂದ ಹೊಸ ವಿದ್ಯೆಯೂ ನಮ್ಮ ಸಂಸ್ಕೃತಿಯ ಬುಡವನ್ನು ಅಷ್ಟಿಷ್ಟು ಅಲ್ಲಾಡಿಸಿತು.

ಕ್ರಿಶ್ಚಿಯನ್ ಪಾದರಿಗಳು ನಮ್ಮ ಮತಾಚಾರಗಳನ್ನು ಕುರಿತು ಮಾಡಿದ ದೋಷೋದ್ಘಾಟನೆಯ ಮಾತು ಹಾಗಿರಲಿ. ಅದಕ್ಕಿಂತ ಹೆಚ್ಚು ಪ್ರಭಾವಶಾಲಿಯಾದದ್ದು ಇಂಗ್ಲಿಷಿನೊಡನೆ ಬಂದ ವಿಜ್ಞಾನ ಶಾಸ್ತ್ರ (ಸಯನ್ಸ್). ಈ ವೈಜ್ಞಾನಿಕ ಪ್ರೇರಣೆ ಪ್ರಶ್ನೋತ್ಥಾಪಕವಾದದ್ದು. "ಅದು ಹೇಗೆ? ಇದು ಏಕೆ? ಸ್ವರ್ಗವೆಲ್ಲಿದೆ? ದೇವರಿದ್ದಾನೆನ್ನಲು ನಿದರ್ಶನವೇನು? ಕರ್ಮಗತಿಗೆ ರುಜುವಾತೇನು? ಪುನರ್ಜನ್ಮಕ್ಕೆ ಸಾಕ್ಷಿಯಾರು?" ಈ ತೆರದ ಪ್ರಶ್ನೆಗಳು ಹಳೆಯ ನಂಬಿಕೆಗಳ ಪಾಲಿಗೆ ರಾಹುಕೇತುಗಳಾದವು. ಆದರೆ ಈ ಪ್ರಾಚೀನಸಂಸ್ಕೃತಿಗೆ ತಗುಲಿದ ಗ್ರಹಣ ಯೂರೋಪನ್ನು ಬಿಟ್ಟಿದ್ದದ್ದಲ್ಲ. ಅಲ್ಲಿಯೂ ಮತಧರ್ಮ ಗ್ಲಾನಿಯಾಯಿತು. ಅದರಂತೆ ನಮ್ಮಲ್ಲಿಯೂ ಆಯಿತು. ಈಚೀಚೆಗೆ ಅಲ್ಲಿ ಗ್ರಹಣಬಿಡುವುದರ ಸೂಚನೆ ತೋರಿಬರುತ್ತಿದೆ. ವಿಜ್ಞಾನಶಾಸ್ತ್ರಕ್ಕೆ ಮೊದಲಿದ್ದ ಆತ್ಮವಿಶ್ವಾಸದ ಅತಿರೇಕ ಈಗೀಗ ಇಳಿದು, ತನ್ನ ಸಿದ್ಧಾಂತಗಳ ವಿಷಯದಲ್ಲಿ ಅದಕ್ಕೆ ಈಗ ಪುನರ್ವಿಮರ್ಶೆಯ ಆವಶ್ಯಕತೆ ತೋರುತ್ತಿದೆ. ಆದದ್ದರಿಂದ ಮತಧರ್ಮಕ್ಕೆ ವಿಜ್ಞಾನದ ದೆಸೆಯಿಂದ ಅಪಾಯಸಂಭವ ಕಡಮೆಯಾಗುತ್ತಿದೆ. ವಿಜ್ಞಾನವು ಈಗ ಮತಧರ್ಮವನ್ನು ನಿರಾಕರಿಸದು. ಭರತಖಂಡದ ಸಂಸ್ಕೃತಿಯಲ್ಲಿ ವಿಶ್ವಾಸವುಳ್ಳವರಿಗೆ ಇದೊಂದು ಪ್ರೋತ್ಸಾಹದ ಸಂಗತಿ.

ಇಂದಿನ ಪ್ರಪಂಚದಲ್ಲಿ ಭಾರತೀಯ ಸಂಸ್ಕೃತಿಗೆ ಒಂದು ಸ್ಥಳವುಂಟೆ? ಅದು ಇನ್ನೂ ಬಾಳಿ ಬೆಳೆಯಬೇಕಾದರೆ ತನ್ನ ರಚನೆರೀತಿಗಳಲ್ಲಿ ಅದು ಸಮೀಕರಣಗಳನ್ನೇನಾದರೂ ಮಾಡಿಕೊಳ್ಳಬೇಕೆ? ಅವು ಎಂಥವು? ಇವು ಹೇಗೆ ಮುಖ್ಯವಾದ ಪ್ರಶ್ನೆಗಳೋ ಹಾಗೆ ಕ್ಲಿಷ್ಟವಾದವು. ಪ್ರಕೃತದ ಲೇಖಕನು ಸಂಕ್ಷೇಪವಾಗಿ ಉತ್ತರಕೊಡಲು ಯತ್ನಿಸಬಹುದಾದರೆ ಅದು

ಹೀಗೆ :—ಯಾವ ಅಧ್ಯಾತ್ಮದೃಷ್ಟಿಯೂ, ಯಾವ ಭೋಗ ಪರಿಮಿತಿಯ ಮತ್ತು ಲೋಭನಿಯಂತ್ರಣದ ರೂಪವಾದ ನೀತಿಯೂ ಆರ್ಷೇಯ ಸಂಸ್ಕೃತಿಯ ಲಕ್ಷಣಗಳಾಗಿ ಬಂದಿವೆಯೋ ಅವು ಇಂದಿನ ಪ್ರಪಂಚಕ್ಕೆ ಅತ್ಯಂತ ಅವಶ್ಯವಾಗಿವೆ. ಎಲ್ಲ ರಾಷ್ಟ್ರಗಳೂ ಆ ಧರ್ಮತತ್ತ್ವವನ್ನು ತಮ್ಮ ಮೂಲ ಸೂತ್ರವಾಗಿ ಅಂಗೀಕರಿಸಿಕೊಂಡ ಹೊರತು ಜನಜನಾಂಗಗಳಿಗೆ ನೆಮ್ಮದಿಯಾಗದು. ಆದರೆ ಮೊದಲು ನಾವು ಆ ಸೂತ್ರದ ಅಂತರ್ಭಾವಗಳನ್ನು ನಮ್ಮ ಮನಸ್ಸುಗಳಿಗೆ ವಿಶದಪಡಿಸಿಕೊಂಡು ನಮ್ಮ ಜೀವಿತವ್ಯಾಪಾರಗಳಿಗೆ ಅನ್ವಯಿಸಿಕೊಳ್ಳಬೇಕು. ಇತರರು ನಮ್ಮಿಂದ ಕಲಿತು ನಮ್ಮ ಮೇಲ್ಪಂಕ್ತಿಯನ್ನನುಸರಿಸಲಿ—ಎನ್ನುವ ಸ್ಥಿತಿಯಲ್ಲಿ ಈ ಹೊತ್ತು ನಾವಿದ್ದೇವೆಯೆ? ಯಾವ ಕಡೆ ನೋಡಿದರೂ ಇಂದು ನಮ್ಮ ದೇಶದಲ್ಲಿ ಅವ್ಯವಸ್ಥೆ, ಅಸಂತೃಪ್ತಿ, ಅವಲಕ್ಷಣ. ಪುರಾತನವನ್ನು ಅದ್ಯತನದೊಂದಿಗೆ,—ಆರ್ಷೇಯವನ್ನು ಪಾಶ್ಚಾತ್ಯದೊಂದಿಗೆ,—ಸಮನ್ವಯಗೊಳಿಸುವ ಪ್ರಶ್ನೆಯನ್ನು ನಾವು ಇನ್ನೂ ಆಮೂಲಾಗ್ರವಾಗಿ ವಿಚಾರಮಾಡಿಲ್ಲ. ಭಾರತೀಯತೆಯನ್ನು ವಿರೂಪಗೊಳಿಸದೆ,—ನಮ್ಮ ರಾಷ್ಟ್ರವು ಬಲಸಂಪತ್ತುಗಳಲ್ಲಿ ಯಾವ ರಾಷ್ಟ್ರಕ್ಕೂ ಕೀಳಾಗದೆ,—ಶಿಷ್ಟಲೋಕಕ್ಕೆ ಗಣ್ಯವಾಗುವಂತೆ ನಮ್ಮ ಸಂಸ್ಕೃತಿಯನ್ನು ಪುನಸ್ಸಮೀಕರಣಗೊಳಿಸಬೇಕು. ವಿಚಾರವಿಮರ್ಶನೆಗಳಿಂದಲೇ ಅದು ಸಾಧ್ಯವಾಗಬಲ್ಲದ್ದು. ಮನುಗಳ ಮಾತು ಹೀಗಿದೆ:—

ಜಾತಿಜಾನಪದಾನ್ ಧರ್ಮಾನ್<br>
ಶ್ರೇಣೀಧರ್ಮಾಂಶ್ಚ ಧರ್ಮವಿತ್ ।<br>
ಸಮೀಕ್ಷ್ಯಕುಲಧರ್ಮಾಂಶ್ಚ<br>
ಸ್ವಧರ್ಮಂ ಪ್ರತಿಪಾದಯೇತ್ ॥

ಆ ಸಮೀಕ್ಷಣೆ ಭಾರತಾಭಿಮಾನಿಗಳ ಪ್ರಥಮಕರ್ತವ್ಯ. ಸಮೀಕ್ಷೆಯಿಂದ ಸಮನ್ವಯ.

ಸಂಸ್ಕೃತಿಗೆ ಜನಾದರಣೆಯ ವಿಷಯದಲ್ಲಿ ಪ್ರತಿಕೂಲವಾದ ಸಂದರ್ಭವೊಂದು ಅದರ ಶರೀರದೊಳಗೇ ಅಡಗಿಕೊಂಡಿರುತ್ತದೆ. ಸಂಸ್ಕೃತಿಯೆಂದರೆ ಜೀವನದ ಯಾವ ಒಂದು ಸಾಮಗ್ರಿಯೂ ಅತಿಯಾಗದಿರುವುದು ; ಎಲ್ಲವೂ ಮಿತಿಯಲ್ಲಿರುವುದು. ಇಂಥ ಮಿತಸ್ಥಿತಿ ಬಹುಮಂದಿಗೆ ಸಪ್ಪೆ,—ನೀರುಚಿ. ಈ ದೃಷ್ಟಿಯಿಂದ ಜನದಲ್ಲಿ ಎರಡು ಜಾತಿ ಸ್ವಾಭಾವಿಕವೆಂದು ತೋರುತ್ತದೆ. ಬಹುಮಂದಿಗೆ ಬೇಕಾದದ್ದು ರಭಸ, ಜೋರು, ವೇಗ. ಶಾಂತಿಯನ್ನೂ ಸಮರಸವನ್ನೂ ಬಯಸುವವರು ಕೆಲ ಮಂದಿ ಮಾತ್ರ. ಧರ್ಮಭೀಮರಿಬ್ಬರಲ್ಲಿ ಭೀಮಸೇನನಿಗೇ ಲೋಕದ ಕೈಚಪ್ಪಾಳೆ; ಧರ್ಮರಾಯನನ್ನು ಮೆಚ್ಚಿಕೊಳ್ಳುವವರು ಇಲ್ಲೊಬ್ಬರು ಅಲ್ಲೊಬ್ಬರು. ಮಿಸಿಕಿದರೆ ಮೀಸೆ ಹುರಿಮಾಡುತ್ತಾನೆ ಭೀಮ. ಬೆಟ್ಟವನ್ನುರುಳಿಸಲೆ? ಕಡಲನ್ನು ಕುಡಿದುಬಿಡಲೆ? ಮರವನ್ನು ಬೇರುಮುಟ್ಟ ಕಿತ್ತು ಅಪ್ಪಳಿಸಲೆ? ಗದೆ ಬೀಸಿ ಸೂರ್ಯನನ್ನು ಕೆಡವಲೆ?—ಎಂದು ಅಬ್ಬರಿಸುವವನು ಲೋಕಕ್ಕೆ ವೀರ. ದುಡುಕಬಾರದು; ಪೂರ್ವಾಪರಗಳನ್ನು ವಿಚಾರಿಸೋಣ; ಧರ್ಮದಿಂದೆಲ್ಲಾದರೂ ತಪ್ಪಿಯೇವು !—ಎಂದು ತಡೆಮಾತಾಡುವವನು ಹೇಡಿ. ನುಗ್ಗಿ ಕೈ ಮಾಡುವವನು ಶೂರ; ಕ್ಷಮಿಸುವವನು ಕೈಲಾಗದವನು. ಇದು ಬಹುಜನದ,—ವಿಶೇಷವಾಗಿ ಯುವಜನರ, ಪುಷ್ಟರ, ಬಲಿಷ್ಠರ,—ಮನೋಗತ. ಅಂಥವರಿಗೆ ಸಂಸ್ಕೃತಿಯೆಂಬುದು ಒಂದು ಪಥ್ಯಾನ್ನ,—ಕಾಯಿಲೆಯಿಂದ ಕಂಗೆಟ್ಟಿರುವವರಿಗೆ ತಕ್ಕದ್ದು,—ಎಂದೆನ್ನಿಸುವುದು ಸ್ವಾಭಾವಿಕ ತಾನೆ? ಸಂಸ್ಕೃತಿಯನ್ನು ಮೆಚ್ಚಬಲ್ಲವರು ಲೋಕದ ಕಷ್ಟ ಕಾರ್ಪಣ್ಯಗಳ ಅನುಭವದಿಂದ ಸಂಸ್ಕಾರ ಪಡೆದಿರುವವರು.

ಅಪಕ್ವಭಾವನೆಗಳ ಉತ್ಸಾಹದಿಂದಲೂ ಏಕಪಕ್ಷವಾದಗಳ ಆವೇಶದಿಂದಲೂ ಜನ ಮರುಳುಹೋಗಿ ಹೆಜ್ಜೆತಪ್ಪಿ ಬಿದ್ದದ್ದನ್ನು ಯಾರು ಕಂಡಿರುತ್ತಾರೋ ಅವರು ಅದರಿಂದ ವಿವೇಕ ತಂದುಕೊಂಡವರಾಗಿ ಸಂಸ್ಕೃತಿಗೆ ಬೆಲೆಕೊಟ್ಟಾರು. ಮಿಕ್ಕವರ ಪಾಲಿಗೆ ಅದು ಜೀವನಸಾಮಗ್ರಿಯಲ್ಲ; ಬರಿಯ ಮೇಲಲಂಕಾರ.

---

## ಎಮರ್ಸನ್ನನ ಮಾತು

ಸಂಸ್ಕೃತನಾದವನು ಎಲ್ಲ ಗುಣಗಳನ್ನೂ ಒಂದು ಔಚಿತ್ಯ ವಿಹಿತವಾದ ಮಿತಿಯಲ್ಲಿರಿಸುತ್ತಾನೆಂದು ಮೇಲೆ ಹೇಳಿದೆಯಷ್ಟೆ? ಅಮೆರಿಕದ ತತ್ತ್ವದರ್ಶಿಯಾದ ಎಮರ್ಸನ್ (Ralph Waldo Emerson, 1803-1882) ಹೀಗೆ ಹೇಳಿದ್ದಾನೆ: "ಸಂಸ್ಕೃತಿಯು ಮನುಷ್ಯನ ಅತಿವಾದ ಪ್ರವೃತ್ತಿಯನ್ನು ಕೊಲ್ಲುತ್ತದೆ; ಅವನ 'ನನ್ನ ಹಳ್ಳಿ, ನನ್ನ ಊರು' ಎಂಬ ಜಂಬವನ್ನು ಕೊಲ್ಲುತ್ತದೆ. ನಾವು ಬೀದಿಗೆ ಒರುವಾಗ ನಮ್ಮ ಮುದ್ದು ಮರಿಗಳನ್ನು ಮನೆಯಲ್ಲಿಯೇ ಬಿಟ್ಟು, ಎದುರಿಗೆ ಬಂದವರನ್ನು ವಿವೇಕದಿಂದಲೂ ಒಳ್ಳೆಯತನದಿಂದಲೂ ಕೂಡಿದ ವಿಶಾಲದೃಷ್ಟಿಯಿಂದ ನೋಡಬೇಕು. ಸೌಹಾರ್ದವನ್ನು ಬಿಟ್ಟ ಯಾವ ಕೆಲಸವೂ ಯೋಗ್ಯವಾಗಲಾರದು . . . ಪ್ರತಿಭಾವಂತನೆನಿಸಿ ಪ್ರಸಿದ್ಧನಾದವನು ಆ ಪ್ರಸಿದ್ಧಿಯನ್ನು ಅತಿಯಾದ ಬೆಲೆಕೊಟ್ಟು ಕೊಂಡುಕೊಂಡಿರುತ್ತಾನೆ. ಅವನ ತಲೆ ಗೋಪುರವಾಗಿ ಮೇಲಕ್ಕೆದ್ದಿರುತ್ತದೆ. ಅವನು ಆರೋಗ್ಯಶಾಲಿಯಾದ ಮನುಷ್ಯನಂತೆ ಸಂತೋಷಿಯೂ ವಿವೇಕಿಯೂ ಆಗಿರುವುದಕ್ಕೆ ಬದಲಾಗಿ ಹುಚ್ಚುಹಿಡಿದ ಭಟ್ಟೋಪಾಧ್ಯಾಯನಂತೆ ಆಡುತ್ತಾನೆ. ಇಂಥ ಅಂತರ್ಜನಿತವಾದ ಅಹಂಭಾವಕ್ಕೆ ನಮ್ಮ ಹೊರಗೆ ನಾವು

ಹುಡುಕಿ ಕಂಡುಕೊಳ್ಳುವ ಆಕರ್ಷಣೆಗಳ ವಿಸ್ತಾರವೇ, ಅವುಗಳ ವಿವಿಧತೆಯೇ, ತಕ್ಕ ಔಷಧ. ಪ್ರಪಂಚಪರಿಚಯ, ಯೋಗ್ಯರ ಸ್ನೇಹ, ವಿವಿಧ ಜನವರ್ಗಗಳ ಸಹವಾಸ, ದೇಶಸಂಚಾರ, ಉತ್ತಮ ಶುಶ್ರೂಷೆ, ತತ್ತ್ವವಿಚಾರ, ಕಲೆ, ಮತಧರ್ಮಗಳಲ್ಲಿ ಆಲೋಡನೆ,—ಗ್ರಂಥವ್ಯಾಸಂಗ, ದೇಶಸಂಚಾರ, ಸಮಾಜಾಸಕ್ತಿ, ಏಕಾಂತಾಭ್ಯಾಸ—ಇವೇ ಮನುಷ್ಯನಲ್ಲಿ ಸಹಜವಾಗಿರುವ ಅಹಂಕಾರಕ್ಕೆ ಮದ್ದು."

"ಅಹಂಕಾರ ಕ್ಷಯಿಸಿದಂತೆ ನಮ್ಮೊಳಗೆ ಅಸಮಾಧಾನ ಕ್ಷಯಿಸುತ್ತದೆ; ಮತ್ತು ಲೋಕಕ್ಕೆ ನಮ್ಮಿಂದಾಗುವ ಭಾರ ಕಡಮೆಯಾಗುತ್ತದೆ. ಜೀವನದ ಭಾರವನ್ನು ಹಗುರಮಾಡುವ ಯೋಗವೇ ಸಂಸ್ಕೃತಿ. ಅದೇ ಆತ್ಮಸಂಸ್ಕಾರ. ('ಕಲ್ಚರ್' ಎಂಬ) ಇಂಗ್ಲಿಷ್ ಮಾತಿನ ಭಾವದಂತೆ, ಅದೇ ಅಂತರಂಗ ಕೃಷಿ—ಅಂತರಾತ್ಮ ವ್ಯವಸಾಯ." ಎಮರ್ಸನ್ನನ ಈ ಕೆಳಗಿನ ಪದ್ಯದಲ್ಲಿ ಈ ಎಲ್ಲ ಅರ್ಥವೂ ಅಡಕವಾಗಿದೆ.

> ನಿಯಮಗಳೊ, ಬೋಧಕರೊ, ಅನುಗೊಳಿಸಲಾದಪುದೆ
> ಬಯಸುತ್ತೆ ನಾಂ ನಿರೀಕ್ಷಿಸಿಹ ದೈವಾಂಶನನು ?
> ಅವನ ದನಿ ತಾನೆ ಸಂಗೀತವಾಗಲ್ವೇಳ್ಕುಮ್
> ಅವನಿ ಗಗನಗಳ ಚೆಲುನೋಟಗಳಿಗಲುಗುತುಂ,
> ಯುವಕಯುವತಿಯರ ಕಣ್ಣಾಟದೊಳಗುಟ್ಟುಗಳ
> ನವುರು ಸೋಂಕಿಂದೆ ಪುಳಕಿಸಿ ಪುಳಕಗೊಳಿಸುತುಂ.
> ಅಂತಾತನಿರ್ದೊಡಂ ತನ್ನಾತ್ಮಕೇಂದ್ರವನೆ
> ಸಂತತಂ ಪಿಡಿದವನ್, ಭೂತವಂ ಭಾವ್ಯದಲಿ
> ಬೆಸೆದು, ಜಗದ ಅದೃಷ್ಟಲೋಹದ್ರವವ ತನ್ನ
> ಹಸನೆರಕದೊಳು ಪೊಯ್ದು ಹೊಸ ಬಿಂಬವಾಗಿಪನು.

---

## ಮನುವಾಕ್ಯ

ಇದರ ಜೊತೆಗೆ ಮನುಮಹರ್ಷಿಗಳ ಒಂದು ವಾಕ್ಯವನ್ನು ಸ್ಮರಿಸೋಣ :—

> ಯತ್ಸರ್ವೇಣೇಚ್ಛತಿ ಜ್ಞಾತುಂ
> ಯನ್ನ ಲಜ್ಜತಿಚಾಚರನ್ ।
> ಯೇನ ತುಷ್ಯತಿ ಚಾತ್ಮಾಸ್ಯ
> ತತ್ಸತ್ತ್ವಗುಣಲಕ್ಷಣಮ್ ॥

[(೧) ಯಾವ ಸತ್ಯಾಕಾಂಕ್ಷೆಯು ಎಲ್ಲ ಕಡೆಗಳಿಂದಲೂ ಜ್ಞಾನವನ್ನರಸುತ್ತದೆಯೋ, (೨) ಯಾವ ಕೆಲಸವನ್ನು ಮಾಡೋಣದರಿಂದ, ಯಾವ ನಡವಳಿಕೆಯನ್ನು ನಡೆಯೋಣದರಿಂದ, ಎಂದಿಗೂ ನಾಚಿಕೆಪಡಬೇಕಾಗಲಾರದೋ, ಮತ್ತು (೩) ಯಾವುದರಿಂದ ಅಂತರಾತ್ಮಕ್ಕೆ ಸಮಾಧಾನವಾಗುತ್ತದೆಯೋ ಅದು—ಆ ಸಂತತ ಜ್ಞಾನಾನ್ವೇಷಣೆ, ಆ ಲೋಕಾಂಗೀಕಾರ ಚಿಂತನೆ, ಆ ಅಂತರಾತ್ಮಹಿತನಿಷ್ಠೆ—ಇವು ಸಾತ್ತ್ವಿಕತೆಯ ಗುರುತು.]

ಈ ಮೂರು ಶಿರನಾಮೆಗಳಲ್ಲಿ ನೂತನ ಜ್ಞಾನಾಪೇಕ್ಷೆ, ಅಭ್ಯುದಯ ಮಾರ್ಗಾನ್ವೇಷಣೆ, ನಿರಹಂಕಾರ, ವಿನಯ, ಸೌಜನ್ಯ, ಪರೇಂಗಿತಚಿಂತನೆ, ಲೋಕಹಿತದೃಷ್ಟಿ, ತತ್ತ್ವವಿವೇಕ, ಅಧ್ಯಾತ್ಮನಿಷ್ಠೆ—ಇವೇ ಮೊದಲಾದ ಗುಣಶೀಲ ಸೌಂದರ್ಯಗಳೆಲ್ಲವೂ ಅಡಕವಾಗಿವೆ.

ಸಂಸ್ಕೃತಿಯೆಂಬುದು ಇದೇ ಅಲ್ಲವೆ ?

# ವಾಲ್ಮೀಕಿ ತೋರಿದ ಆದರ್ಶ

ಸಂಸ್ಕೃತಿಯ ಆದರ್ಶವನ್ನು ವಾಲ್ಮೀಕಿ ಮಹಾಕವಿ ರಾಮಚಂದ್ರಮೂರ್ತಿಯ ವ್ಯಕ್ತಿತ್ವದಲ್ಲಿ ರೂಪಗೊಳಿಸಿದ್ದಾನೆ:

ಸ ತು ನಿತ್ಯಂ ಪ್ರಶಾಂತಾತ್ಮಾ ಮೃದುಪೂರ್ವಂ ಚ ಭಾಷತೇ | ೧
ಉಚ್ಯಮಾನೋಽಪಿ ಪರುಷಂ ನೋತ್ತರಂ ಪ್ರತಿಪದ್ಯತೇ || ೨
ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ | ೩
ನ ಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ || ೪
ದೀನಾನುಕಂಪೀ ಧರ್ಮಜ್ಞೋ ನಿತ್ಯಂ ಪ್ರಗ್ರಹವಾನ್ ಶುಚಿಃ | ೫
ಕುಲೋಚಿತ ಮತಿಃ ಕ್ಷಾತ್ರಂ ಧರ್ಮಂ ಸ್ವಂ ಬಹುಮನ್ಯತೇ || ೬
ಕಲ್ಯಾಣಾಭಿಜನಃ ಸಾಧುರದೀನಃ ಸತ್ಯವಾಗೃಜುಃ | ೭
ವೃದ್ಧೈರಭಿವಿನೀತಶ್ಚ ದ್ವಿಜೈರ್ಧರ್ಮಾರ್ಥದರ್ಶಿಭಿಃ || ೮
ಧರ್ಮಾರ್ಥಕಾಮ ತತ್ತ್ವಜ್ಞಃ ಸ್ಮೃತಿಮಾನ್ ಪ್ರತಿಭಾನವಾನ್ || ೯
ಲೌಕಿಕೇ ಸಮಯಾಚಾರೇ ಕೃತಕಲ್ಪೋ ವಿಶಾರದಃ || ೧೦
ದೃಢಭಕ್ತಿಃ ಸ್ಥಿರಪ್ರಜ್ಞೋ ನಾಸದ್ಗ್ರಾಹೀ ನ ದುರ್ವಚಾಃ | ೧೧
ನಿಸ್ತನ್ದ್ರಿರಪ್ರಮತ್ತಶ್ಚ ಸ್ವದೋಷ ಪರದೋಷವಿತ್ || ೧೨
ಶಾಸ್ತ್ರಜ್ಞಶ್ಚ ಕೃತಜ್ಞಶ್ಚ ಪುರುಷಾನ್ತರ ಕೋವಿದಃ | ೧೩
ಯಃ ಪ್ರಗ್ರಹಾನುಗ್ರಹಯೋರ್ಯಥಾನ್ಯಾಯಂ ವಿಚಕ್ಷಣಃ || ೧೪
ಸತ್ಸಂಗ್ರಹಪ್ರಗ್ರಹಣೇ ಸ್ಥಾನವಿನ್ನಿಗ್ರಹಸ್ಯ ಚ | ೧೫
ಆಯಕರ್ಮಣ್ಯುಪಾಯಜ್ಞಃ ಸಂದೃಷ್ಟ ವ್ಯಯಕರ್ಮವಿತ್ || ೧೬
ಶ್ರೈಷ್ಠ್ಯಂ ಶಾಸ್ತ್ರಸಮೂಹೇಷು ಪ್ರಾಪ್ತೋ ವ್ಯಾಮಿಶ್ರಕೇಷು ಚ | ೧೭
ಅರ್ಥಧರ್ಮೌಚ ಸಂಗೃಹ್ಯ ಸುಖತಂತ್ರೋ ನ ಚಾಲಸಃ || ೧೮
ಅನಸೂಯೋ ಜಿತಕ್ರೋಧೋ ನದೃಪ್ತೋ ನ ಚ ಮತ್ಸರೀ | ೧೯
ನ ಚಾವಮನ್ತಾ ಭೂತಾನಾಂ ನ ಚ ಕಾಲವಶಾನುಗಃ || ೨೦

—ಅಯೋಧ್ಯಾಕಾಂಡ, ಯೌವರಾಜ್ಯಪ್ರಸಂಗ, ಸ. ೧, ಶ್ಲೋ. ೧೦-೩೦.

[ಆತನು ಯಾವಾಗಲೂ ಶಾಂತಸ್ವಭಾವದವನು. ಸಂಭಾಷಣೆಯನ್ನು ತಾನೇ ಮೊದಲುಮಾಡುತ್ತಾನೆ, ಮತ್ತು ಮೃದುವಾಗಿ ಮಾತನಾಡುತ್ತಾನೆ

(೧). ಬಿರುಸಾಗಿ ಮಾತನಾಡಿದವರಿಗೆ ಮರುಬಿರುಸನ್ನು ನುಡಿಯುವುದಿಲ್ಲ (೨). ಎಂದೋ ತನಗೆ ಮಾಡಿದ್ದ ಯಾವುದೋ ಒಂದು ಉಪಕಾರವನ್ನು ಯಾವಾಗಲೂ ನೆನಸಿಕೊಂಡು ಸಂತೋಷಪಡುತ್ತಾನೆ (೩). ನೂರು ಅಪಕಾರಗಳು ತನಗಾಗಿದ್ದರೂ ಅದನ್ನು ನೆನೆಯುವುದೇ ಇಲ್ಲ; ಅದಕ್ಕೆ ಕಾರಣ ತನ್ನಲ್ಲಿ ತನಗಿರುವ ನಂಬಿಕೆ (೪). ಆತನು ದೀನರಲ್ಲಿ ಸಹಾನುಭೂತಿಯುಳ್ಳವನು, ಧರ್ಮ ತಿಳಿದವನು, ತನ್ನ ಮೇಲೆ ತನಗೇ ಹಿಡಿತವಿರಿಸಿಕೊಂಡವನು, ಶುಚಿಯುಳ್ಳವನು (೫). ಕುಲಕ್ಕೆ ತಕ್ಕ ಬುದ್ಧಿ ಸಂಪತ್ತುಳ್ಳವನು ; ತನ್ನ ಕ್ಷತ್ರಿಯಧರ್ಮವನ್ನು ಆತನು ಅದು ದೊಡ್ಡ ದೆಂದು ಗೌರವಿಸುತ್ತಾನೆ (೬). ಶುಭಗುಣಗಳಿಗೆ ಆಕರಪ್ರಾಯನು, ಸಾಧು, ಧೀರನು, ಸತ್ಯಭಾಷಿ, ಸರಳನು (೭). ಧರ್ಮಾರ್ಥಗಳನ್ನು ಬಲ್ಲ ಬ್ರಾಹ್ಮಣರಿಂದಲೂ ವೃದ್ಧರಿಂದಲೂ ನಡವಳಿಕೆ ಕಲಿತವನು (೮). ಧರ್ಮ ಅರ್ಥಕಾಮಗಳೆಂಬ ಪುರುಷಾರ್ಥಗಳ ತತ್ತ್ವವನ್ನರಿತವನು, ಸ್ಮೃತಿಶಕ್ತಿ ಪ್ರತಿಭಾಶಕ್ತಿ ಸಂಪನ್ನನು (೯). ಲೋಕನೀತಿಗಳಲ್ಲಿಯೂ ಸಮಾಜದ ಸಂಕೇತ ಸಂಪ್ರದಾಯಗಳಲ್ಲಿಯೂ ಮರ್ಮವರಿತು ನಡೆಯುವವನು (೧೦). ನಿಶ್ಚಲವಾದ ಭಗವದ್ಭಕ್ತಿಯುಳ್ಳವನು ; ಸ್ಥಿರವಾದ ವಿವೇಕವಿಜ್ಞಾನಗಳುಳ್ಳ ವನು ; ಕೆಟ್ಟದ್ದನ್ನೊಪ್ಪದವನು ; ಕೆಟ್ಟದ್ದನ್ನು ನುಡಿಯದವನು (೧೧). ಸೋಮಾರಿತನವಿಲ್ಲದವನು ; ಮೈಮರೆಯದವನು ; ತನ್ನಲ್ಲಿರುವ ದೋಷ ಗಳನ್ನೂ ಇತರರ ದೋಷಗಳನ್ನೂ ಕಂಡುಕೊಂಡಿರುವವನು (೧೨). ಶಾಸ್ತ್ರ ನಿಪುಣನು ; ಕೃತ್ಯಾಕೃತ್ಯವಿವೇಕಿ ; ಇತರರ ಅಂತರಂಗವನ್ನು ಊಹಿಸಿ ಕಂಡವನು (೧೩). ದಂಡಿಸುವುದರಲ್ಲಿಯೂ ಅನುಗ್ರಹಿಸುವುದರಲ್ಲಿಯೂ ನ್ಯಾಯವನ್ನು ನಡಸಲು ಶಕ್ತನು (೧೪). ಜನರನ್ನು ಸಂಪಾದಿಸಿಕೊಳ್ಳುವು ದರಲ್ಲಿಯೂ ಹದ್ದಿನಲ್ಲಿರಿಸುವುದರಲ್ಲಿಯೂ ತುಳಿದುಹಾಕುವುದರಲ್ಲಿಯೂ ಅದದಕ್ಕೆ ತಕ್ಕ ಸ್ಥಾನ ಕಾಲ ಸಂದರ್ಭಗಳನ್ನರಿತವನು (೧೫). ಆದಾಯದ ಕೆಲಸಗಳಲ್ಲಿ ಉಪಾಯಶಾಲಿ; ವ್ಯಯವಿಚಾರವನ್ನು ನೋಡಿಕೊಳ್ಳುವುದರಲ್ಲಿ ಜಾಗರೂಕನು (೧೬). ಶಾಸ್ತ್ರಜ್ಞ ಸಭೆಯಲ್ಲಿಯೂ ಪಂಡಿತ ಪಾಮರರು ಕಲೆತುಕೊಂಡಿರುವಲ್ಲಿಯೂ ಶ್ರೇಷ್ಠತೆ ಪಡೆದಿರುವವನು (೧೭). ಅರ್ಥ (ಧನ)ವನ್ನೂ ಧರ್ಮವನ್ನೂ ಶೇಖರಮಾಡಿ ಸುಖಪಡುವುದರಲ್ಲಿ ಆಲಸ್ಯ ವಿಲ್ಲದೆ ದಕ್ಷನಾಗಿರುವವನು (೧೮). ಹೊಟ್ಟೆಕಿಚ್ಚಿಲ್ಲದವನು ; ಕೋಪ ವನ್ನು ಗೆದ್ದವನು ; ಗರ್ವವಿಲ್ಲದವನು ; ಕರುಬದವನು (೧೯). ಯಾವ

ಪ್ರಾಣಿಯನ್ನೂ ಅವಮಾನಪಡಿಸದವನು ; ಧರ್ಮತತ್ತ್ವವನ್ನೂ ತನ್ನ ಪ್ರತಿಜ್ಞೆಯನ್ನೂ ಮರೆತು ಆಯಾ ಕ್ಷಣಕ್ಕೆ ಸರಿಯೆನಿಸಿದಂತೆ ನಡೆಯುವವನಲ್ಲ (೨೦).]

ಸಂಸ್ಕೃತಿಯು ಸ್ವರೂಪವೆಂಥಾದ್ದೆಂಬುದನ್ನು ಮನಗಾಣ ಬಯಸುವವರು ನಮ್ಮ ಆದಿಕವಿ ಬರೆದ ಈ ರಾಮಮೂರ್ತಿಯ ಚಿತ್ರಪಟವನ್ನು ನೋಡಿ ಮನಸಮಾಡಲಿ.

# ಶೋಧನ ಪತ್ರ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೨೭ | ೨೯ | ವಿಷಯಗಳಿಂದ | ವಿಷಯಗಳಾದ |
| ೪೦ | ೧೩ | ವವರಿಗೇ | ವವರಿಗೆ |
| ೪೬ | ೧೧ | ಜೋಡಿ ಜೋಡಿಯೂ | ಜೋಡಿಯ ಎರಡೂ |
| ೫೩ | ೨೩ | ಅಂಶವಿಶೇಷ | ಅಂಶವು ವಿಶೇಷ |
| ೮೩ | ೨೧ | ಆತ್ಮಸ್ವಭಾವನಾ | ಸ್ವಾನ್ಯೈಕ್ಯಭಾವನಾ |